# ವಚನಕಾರರು ಮತ್ತು ಆಂದೋಲನಗಳು



ಹ. ನಂ. ವಿಜಯಕುಮಾರ್

ಪ್ರಕಾಶಕರು :
ಶ್ರೀ ಬಸವೇಶ್ವರ ಗ್ರಂಥಮಾಲೆ
ಹಳೇವೂರು, ಕುಣಿಗಲ್ ತಾಲ್ಲೂಕು
ತುಮಕೂರು ಜಿಲ್ಲೆ, ಕರ್ನಾಟಕ ರಾಜ್ಯ

VACHANAKAARARU MATHU ANDOLANAGALU—
Written by H. N. Vijayakumar, M.A., M.Phil., 191, 2nd Cross, Dattatreya Extension, Bangalore-560 019,
Pages 132+6=138; First Edition: 1981.
Price: Ordinary Rs. 14-00. Calico Rs. 24-00

ವಚನಕಾರರು ಮತ್ತು ಆಂದೋಲನಗಳು

ಹ. ನಂ. ವಿಜಯಕುಮಾರ್



ಸಾದಾ : ಹದಿನಾಲ್ಕು ರೂಪಾಯಿಗಳು

ಕ್ಯಾಲಿಕೋ : ಇಪ್ಪತ್ತನಾಲ್ಕು ರೂಪಾಯಿಗಳು

Cover Page: H. N. V. Kumar

ಬೀಕೆ ಪ್ರಿಂಟರ್ಸ್

ಕಿಲಾರಿ ರಸ್ತೆ, ಬೆಂಗಳೂರು-560 053

ಅಪರೂಪಕ್ಕೊಮ್ಮೆ ಮನೆಗೆ ಹೋದಾಗ ತೊದಲು ನುಡಿಗಳಿಂದ ಚಿಪಪ, ಚಿಪಪ್ಪ ಎಂದು ಕೊರಳು ಬಳಸುತ್ತಿದ್ದ ನನ್ನಣ್ಣ ನಾಗರಾಜಯ್ಯ ಅವರ ಮುದ್ದು ಮಕ್ಕಳು **ಸೌಮ್ಯ** ಮತ್ತು **ದಿಲೀಪ**ನಿಗೆ ಪ್ರೀತಿಯಿಂದ.





# ವಚನಕಾರರು ಮತ್ತು ಆಂದೋಲನಗಳು

## ಆಂದೋಲನ ಎಂದರೇನು ?

ಇತಿಹಾಸ ಸಿಡಿಸಿದ ಮಹತ್ವದ ಘಟನೆಯಿಂದಾಗಿ ಚರಿತ್ರೆಯಲ್ಲಿ ಕೆಲವು ಹೊಸ ದಾಖಲೆಗಳು ಉಂಟಾಗುತ್ತವೆ. ಚರಿತ್ರೆಯ ಈ ಥರದ ಮುಂದುವರಿಕೆಯೇ ಸಂಸ್ಕೃತಿಯ ಬೆಳವಣಿಗೆಯ ಘಟಕವಾಗಿದೆ. ಈ ದಿಸೆಯಲ್ಲಿ ಹೊಸ ಶಬ್ದಗಳು ಉಂಟಾಗುವುದು, ಅರ್ಥಪಡೆಯುವುದು ಮತ್ತು ಅದುವರೆಗೆ ಪ್ರಯೋಗವಾಗುತ್ತಿದ್ದ ಪದಗಳಿಗೆ ಅರ್ಥವ್ಯಾಪ್ತಿಯಾಗುವುದೂ ನಡೆಯುತ್ತದೆ. ಶಬ್ದಗಳನ್ನು ಬಳಸುತ್ತ ಹೋದಂತೆಲ್ಲ ಯಾವುದೋ ಒಂದು ಘಟ್ಟದಲ್ಲಿ ಅದರ ಅರ್ಥವ್ಯಾಪ್ತಿಯ ಬಗೆಗೆ ಗೊಂದಲ ಏರ್ಪಡುತ್ತದೆ. ಇದರಿಂದಾಗಿ ಪದದ ಅರ್ಥ ಖಚಿತಪಡಿಸಿಕೊಂಡು ಮುಂದುವರಿಯುವುದು ಅನಿವಾರ್ಯ ಆಗುತ್ತದೆ.

ರೆವಲೂಷನ್‌ಗೆ ಇಂಗ್ಲಿಷ್, ಕನ್ನಡ ನಿಘಂಟುಕಾರರು[1] ಕ್ರಾಂತಿ ಎಂದು ಅರ್ಥ ಕೊಡುತ್ತಾರೆ. ಕ್ರಾಂತಿ ಎಂದ ಕೂಡಲೆ ರಕ್ತ ಪ್ರವಾಹ, ಭೀಕರ ಯುದ್ಧಗಳು, ಅಪಾರ ಹೆಣಗಳ ಉರುಳುವಿಕೆ, ಬಂಡಾಯ ಇತ್ಯಾದಿ ಚಿತ್ರಗಳು ಥಟ್ಟನೆ ಸ್ಮರಣೆಗೆ ಬರುತ್ತವೆ. ಕನ್ನಡ ಕನ್ನಡ ನಿಘಂಟುಕಾರರು ಕ್ರಾಂತಿಗೆ[2] ಆಂದೋಲನ ಎಂದು ಅರ್ಥಕೊಡುತ್ತಾರೆ. ಕ್ರಾಂತಿ ಅದುವರೆಗೆ ವ್ಯವಸ್ಥೆಯಾಗಿದ್ದನ್ನು ಕಿತ್ತೊಗೆದು ಹೊಸ ವ್ಯವಸ್ಥೆಯನ್ನು ಸ್ಥಾಪಿಸುತ್ತದೆ. ಹಳೆಯ ವ್ಯವಸ್ಥೆಗೆ ಕಾರಣನಾದ ದೊರೆಯನ್ನು ಕೊಂದು ಹೊಸದೊರೆಯೊಬ್ಬ ಅಧಿಕಾರಕ್ಕೆ ಬರುತ್ತಾನೆ. ಇದು ಚರಿತ್ರೆಯಿಂದ ತಿಳಿದುಬರುವ ಅಂಶ. ಕ್ರಾಂತಿಗೆ ಅನೇಕ ಸ್ತರಗಳಲ್ಲಿ ಅರ್ಥವಿದೆ. ರಷಿಯದ 1917ರ ಯುದ್ಧದಿಂದಾಗಿ ರೆವಲೂಷನ್ ಪದಕ್ಕೆ

---

1. ಇಂಗ್ಲಿಷ್ ಕನ್ನಡ ನಿಘಂಟು : ಪ್ರಕಾಶನ, ಮೈಸೂರು ವಿಶ್ವವಿದ್ಯಾನಿಲಯ, 1965.
2. ಕನ್ನಡ ಕನ್ನಡ ನಿಘಂಟು : ಕನ್ನಡ ಸಾಹಿತ್ಯ ಪರಿಷತ್ ಪ್ರಕಟಣೆ, ಸಂಪುಟ ೩.

ಆದುವರೆಗೆ ಇರದಿದ್ದ ವ್ಯಾಪಕ ಅರ್ಥಬಂತು. ಆ ಯುದ್ಧದಲ್ಲಿ ಝಾರ್ ಪ್ರಭುತ್ವವನ್ನ, ವಂಶಪಾರಂಪರ್ಯವಾಗಿ ಆಳಿಕೊಂಡು ಬರುತ್ತಿದ್ದುದನ್ನು ಕಾರ್ಮಿಕರು ಕಿತ್ತೊಗೆದರು. ಝಾರ್ ಆಡಳಿತವನ್ನು ಸಂಪೂರ್ಣವಾಗಿ ತೆಗೆದುಹಾಕಿ ಕಾರ್ಮಿಕರ ಹೊಸ ಆಡಳಿತವ್ಯವಸ್ಥೆ ರೂಢಿಗೆ ಬಂತು. ಅಲ್ಲದೆ ಇದರಿಂದಾಗಿ ಆರ್ಥಿಕ ಮತ್ತು ಸಾಂಸ್ಕೃತಿಕ ರಂಗದಲ್ಲೂ ಬುಡ್ಡಮಟ್ಟ ಮಾರ್ಪಾಡುಗಳು ಉಂಟಾದವು. 1917 ರ ಈ ಯುದ್ಧದಿಂದಾಗಿ ಕ್ರಾಂತಿ ಎಂದರೆ ಕೇವಲ ರಾಜನ ವಿರುದ್ಧ ಬಂಡಾಯ ಎದ್ದು ಅವನನ್ನು ತೆಗೆದುಹಾಕುವುದಲ್ಲ, ವ್ಯವಸ್ಥೆಯನ್ನು ತೆಗೆದು ಹಾಕಿ ಹೊಸ ವ್ಯವಸ್ಥೆಯನ್ನು ರೂಪಿಸುವುದು ಎಂದು ಅರ್ಥಬಂತು. ಅಲ್ಲದೆ ಆ ಯುದ್ಧದಿಂದಾಗಿ ಸಾಂಸ್ಕೃತಿಕ, ಆರ್ಥಿಕ ರಂಗದಲ್ಲೂ ಪೂರ್ಣಬದಲಾವಣೆ ಆಗಿದ್ದರಿಂದ ಕ್ರಾಂತಿ ಇತರ ರಂಗದಲ್ಲಿಯೂ ಬದಲಾವಣೆ ತರುತ್ತದೆ ಎಂಬ ಸಾಧ್ಯತೆ ತಿಳಿದು ಬಂತು.

ರಷಿಯದ 1917 ರ ಯುದ್ಧ ಸಂಭವಿಸುವ ಮುನ್ನ ಅರ್ಥಕೋಶಕಾರರು, ವಿಶ್ವಕೋಶಕಾರರು ತೀರ ಸಣ್ಣಯುದ್ಧವನ್ನು ಕ್ರಾಂತಿ ಎಂದು ಕರೆದಿದ್ದಾರೆ. ಕ್ರಾಂತಿ ಅಥವಾ ರೆವಲೂಷನ್ ಪದವನ್ನು ಕೇವಲ ರಾಜಕೀಯವಾದ ಯುದ್ಧ ಮತ್ತು ಬಂಡಾಯಗಳಿಗೆ ಬಳಸುವುದು ಈ ವಿಶ್ವಕೋಶಕಾರರು ಅರ್ಥಕೋಶಕಾರರಿಂದಲೇ ನಡೆದಿದೆ. ದಿ ವರ್ಲ್ಡ್‌ಬುಕ್ ಎನ್‌ಸೈಕ್ಲೊಪೀಡಿಯ ಮತ್ತು ದಿ ನ್ಯೂ ಎನ್‌ಸೈಕ್ಲೊಪೀಡಿಯ ಬ್ರಿಟಾನಿಕಾದವರು ಮಾತ್ರ ಇದಕ್ಕೆ ಹೊರತಾಗಿದ್ದಾರೆ. ಇವರು ರೆವಲೂಷನ್ ಪದ ಏನೇನು ಅರ್ಥಕೊಡಬಲ್ಲದು ಎಂಬುದನ್ನು ವಿಸ್ತಾರವಾಗಿ ಚರ್ಚಿಸಿ ಮೂರು ರೀತಿಯ ಅರ್ಥಗಳನ್ನು ಕೊಡುತ್ತಾರೆ.

ಇಂಗ್ಲೆಂಡ್‌ನಲ್ಲಿ 1688ರಲ್ಲಿ ಎರಡನೇ ಜೇಮ್ಸ್‌ನನ್ನು ತೆಗೆದುಹಾಕಿ ಸ್ಟೂವರ್ಟ್‌ರಾಜಸಂತತಿ ಮತ್ತೆ ಅಧಿಕಾರಕ್ಕೆ ಬರದಂತೆ ಮಾಡಿದ್ದನ್ನು ಕ್ರಾಂತಿ ಎನ್ನುವ ಪರಿಪಾಠ ಇದೆ. ಹಾಗೆಯೇ ಫ್ರಾನ್ಸಿನಲ್ಲಿ 1789 ರಲ್ಲಿ ರಾಜಪ್ರಭುತ್ವವನ್ನು ತೆಗೆದು ಹಾಕಿದುದನ್ನು ಇದೇ ಹೆಸರಿನಲ್ಲಿ ಕರೆಯಲಾಗಿದೆ. ರಾಜಕೀಯದಿಂದ ನಡೆದ ಯುದ್ಧಗಳನ್ನೆಲ್ಲ ಕ್ರಾಂತಿ ಎನ್ನುವುದಾದರೆ ಪ್ರತಿಯೊಂದು ದೇಶದ ಚರಿತ್ರೆಯೂ ಕ್ರಾಂತಿಗಳಿಂದ ತುಂಬಿಹೋಗಿದೆ ಎನ್ನಬೇಕಾಗುತ್ತದೆ.

ಭಾರತದ ಚರಿತ್ರೆಯಲ್ಲಂತೂ ಒಬ್ಬ ರಾಜನನ್ನು ಅಥವಾ ಒಂದು ವಂಶದ ದೊರೆಯನ್ನು ಕೊಂದು ಮತ್ತೊಂದು ವಂಶದ ರಾಜ, ಪ್ರಭುತ್ವ ನಡೆಸಿರುವ ದಾಖಲೆಗಳು ಹೆಜ್ಜೆ ಹೆಜ್ಜೆಗೂ ಸಿಗುತ್ತವೆ. ಆದರೆ ಇವೆಲ್ಲ ಕ್ರಾಂತಿ ಎನ್ನಿಸಿಕೊಳ್ಳುವುದಿಲ್ಲ. ಸಣ್ಣ ಸಣ್ಣ ಯುದ್ಧ ಬಂಡಾಯ, ದಂಗೆಗಳನ್ನೆಲ್ಲಾ ಕ್ರಾಂತಿ ಎನ್ನುವ ಪರಿಪಾಠ ಪಾಶ್ಚಾತ್ಯ ವಿದ್ವಾಂಸರಿಂದಲೇ ನಮಗೆ ಎರವಲಾಗಿ ಬಂದಿದೆ. ಯುದ್ಧಗಳಿಗೆ ಕ್ರಾಂತಿ ತರುವ ಸಾಮರ್ಥ್ಯವೇನೋ ಇದೆ. ಆದರೆ ಎಲ್ಲ ಯುದ್ಧಗಳು ಕ್ರಾಂತಿತರುವುದಿಲ್ಲ. ಬಾದಾಮಿ ಚಾಲುಕ್ಯರ ಮೇಲಿನ ಚೋಳರ ಯುದ್ಧ ವಿಜಯವನ್ನು ಕ್ರಾಂತಿ ಎನ್ನುವುದು ಹಾಸ್ಯಾಸ್ಪದ ಆಗುತ್ತದೆ. ಅದೊಂದು ಯುದ್ಧವೇ ಹೊರತು ಕ್ರಾಂತಿ ಅಲ್ಲ. ಹಾಗೆಯೇ ಸ್ಟೂಅರ್ಟ್ ರಾಜಸಂತತಿಯ ಎರಡನೇ ಜೇಮ್ಸ್ ಇಂಗ್ಲೆಂಡ್‌ನಿಂದ ಓಡಿಹೋದುದನ್ನು ಯಾವರಕ್ತಪಾತವೂ ಇಲ್ಲದೆ ಅಧಿಕಾರ ಹಸ್ತಾಂತರ ಆದುದನ್ನು ಕ್ರಾಂತಿ ಎನ್ನಲಾಗುವುದಿಲ್ಲ. ಹೆಚ್ಚೆಂದರೆ ದಂಗೆಯಾಗಬಹುದು. ಈ ಯುದ್ಧವನ್ನು ಕ್ರಾಂತಿ ಎಂದು ಕರೆದ ಗ್ರಂಥಕಾರರೇ [3] ರಷಿಯದ 1918 ರ ಯುದ್ಧವನ್ನು ಹೆಸರಿಸಿ ಕ್ರಾಂತಿ ಎಂದು ಕರೆಯುತ್ತಾರೆ. ಅಲ್ಲದೆ ಭಾರತದ 1947 ರ ಸ್ವಾತಂತ್ರ್ಯ ಸಂಗ್ರಾಮವನ್ನು ಹೆಸರಿಸಿ ಇದು ಇನ್ನೊಂದು ಬಗೆಯ ಕ್ರಾಂತಿ ಎನ್ನುತ್ತಾರೆ. ಆಡಳಿತ ಷಾಹಿಯ ವಿರುದ್ಧ ಇಡೀ ದೇಶವೇ ಅಸಹಕಾರ ವ್ಯಕ್ತಪಡಿಸಿ ಯಾವ ಯುದ್ಧವೂ ಇಲ್ಲದೆ ದೀರ್ಘ ಆಂದೋಲನದಿಂದ ಪಡೆದ ಈ ವಿಜಯ ಕ್ರಾಂತಿ ಎನ್ನುತ್ತಾರೆ. ಅಂದರೆ ಕ್ರಾಂತಿಗೆ ಮೂರು ಅರ್ಥಕೊಡುತ್ತಾರೆ. 1) ರಕ್ತಪಾತವಿಲ್ಲದೆ ರಾಜನೊಬ್ಬನನ್ನು ಓಡಿಸಿವುದು 2) ವ್ಯವಸ್ಥೆ, ವ್ಯವಸ್ಥೆಗೆ ಕಾರಣವಾದ ದೊರೆ ಎಲ್ಲವನ್ನು ರಕ್ತಪಾತ, ಘೋರಯುದ್ಧ ತೀವ್ರ ದಬ್ಬಾಳಿಕೆ ಎಲ್ಲವನ್ನು ಒಟ್ಟುಗೂಡಿಸಿ ಬಲ ಪ್ರಯೋಗದಿಂದ ಹೊಸವ್ಯವಸ್ಥೆ, ಹೊಸರಾಜನನ್ನು ತರುವುದು. 3] ಯಾವ ರಕ್ತಪಾತವೂ ಇಲ್ಲದೆ ದೇಶಕ್ಕೆ ದೇಶವೇ ಆಡಳಿತ ಷಾಹಿವಿರುದ್ಧ ಅಸಹಾರ ವ್ಯಕ್ತಪಡಿಸಿ ವಿಜಯ ಸಾಧಿಸುವುದು. ಈ ಮೂರನೆಯದು ಆಂದೋಲನ ಎನ್ನಿಸಿಕೊಳ್ಳುತ್ತದೆ. ಎರಡನೆಯದು ಮಾತ್ರ ಪೂರ್ಣವಾಗಿ ಕ್ರಾಂತಿ ಎನ್ನಿಸಿಕೊಳ್ಳುತ್ತದೆ.

---

3. The Great Ideas : Revolution, ಪುಟ 626, ಪ್ರಕಾಶನ : ದಿ ನ್ಯೂ ಎನ್‌ಸೈಕ್ಲೊಪೀಡಿಯ ಬ್ರಿಟಾನಿಕದವರಿಂದ.

ಬಂಡಾಯ ಅಥವಾ ದಂಗೆ, ಯುದ್ಧದ ದಾರಿಯಲ್ಲಿ ರಾಜನೊಬ್ಬನನ್ನು ಕೆಗೆದುಹಾಕಿದರೆ, ಚಳುವಳಿ ಸುಧಾರಣೆಯನ್ನು ತರುತ್ತದೆ. ಬಂಡಾಯ ಅಥವಾ ದಂಗೆ ಹೆಚ್ಚಾಗಿ ರಾಜಕೀಯ ಕ್ಷೇತ್ರದಲ್ಲಿ ಮಾತ್ರ ಸಂಭವಿಸಿದರೆ ಚಳುವಳಿ ಎಲ್ಲ ಸಂದರ್ಭದಲ್ಲೂ ಸುಧಾರಣೆಯನ್ನು ತರಲಾರದು. ಸುಧಾರಣೆ ತರುವ ಸಾಧ್ಯತೆ ಚಳುವಳಿಗೆ ಇದೆ. ಚಳುವಳಿ ರಾಜಕೀಯ. ಧಾರ್ಮಿಕ ರಂಗಗಳೆರಡರಲ್ಲೂ ಉಂಟಾಗುತ್ತದೆ. ಬಂಡಾಯ ಹೇಗೆ ಎಲ್ಲ ಸಂದರ್ಭದಲ್ಲೂ ವಿಜಯ ಸಾಧಿಸಲಾರದೋ ಹಾಗೆಯೇ ಚಳುವಳಿ ಎಲ್ಲ ಸಂದರ್ಭದಲ್ಲೂ ಸುಧಾರಣೆಯನ್ನು ತರಲಾರದು. ಸುಧಾರಣೆ ತರುವ ಸಾಧ್ಯತೆ ಚಳುವಳಿಗೆ ಇದೆ. 1975ರ ತುರ್ತುಪರಿಸ್ಥಿತಿಯನ್ನು ವಿರೋಧಿಸಿ ಆದ ಭಾರತದ ಜೆ.ಪಿ. ಚಳುವಳಿ ಯಶಸ್ವಿಯಾಗಿ ಅಧಿಕಾರವನ್ನು ಹಸ್ತಾಂತರಗೊಳಿಸಿತು. ನ್ಯಾಯಸಮ್ಮತವಾದ ಕೆಲವು ಸುಧಾರಣೆಗಳನ್ನು ತಂದಿತು. ಇಷ್ಟಕ್ಕೆ ಇದರ ಸಾಮರ್ಥ್ಯ ಮಿತಿಗೊಂಡಿತು.

ಚಳುವಳಿಗೆ ಸುಧಾರಣೆ ತರುವ ಸಾಧ್ಯತೆ ಇದ್ದಂತೆ ಆಂದೋಲನಕ್ಕೆ ಕ್ರಾಂತಿ ತರುವ ಸಾಮರ್ಥ್ಯ ಇದೆ. ಆದರೆ ಅದು ಕ್ರಾಂತಿಯನ್ನು ತರದೆ ಆಂದೋಲನದಲ್ಲಿಯೇ ಪರ್ಯವಸಾನವಾಗಲೂಬಹುದು. ಚಳುವಳಿಯಲ್ಲಿ ಭಾಗವಹಿಸುವಂತೆ ಆಂದೋಲನದಲ್ಲಿಯೂ ಇಡೀ ದೇಶದ ಜನತೆ ಭಾಗವಹಿಸುತ್ತದೆ. ಇದರ ವ್ಯಾಪ್ತಿ ಚಳುವಳಿಗಿಂತ ದೊಡ್ಡದು. ಆಂದೋಲನದ ಉದ್ದೇಶಿತ ಗುರಿ ಬೇಕಿಲ್ಲದ, ಅನ್ಯಾಯವಾದ ಆಡಳಿತವನ್ನು ವಿರೋಧಿಸಿ ನ್ಯಾಯಯುತವಾದ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸುವುದಾಗಿದೆ. ಇದು ಸಾಮಾನ್ಯವಾಗಿ ರಕ್ತಪಾತ, ಯುದ್ಧ, ಬಂಡಾಯ, ದೌರ್ಜನ್ಯದಿಂದ ಹೊರತಾಗಿರುತ್ತದೆ. ಆಂದೋಲನ ಕಾಲದಲ್ಲಿ ಇವು ಉಂಟಾದಾಗ ಕ್ರಾಂತಿರೂಪ ಬರುತ್ತದೆ. ಭಾರತದ 1947ರ ಸ್ವಾತಂತ್ರ್ಯ ಸಂಗ್ರಾಮ, ಯುದ್ಧವನ್ನು ನಿರಾಕರಿಸಿ ಸಾಮೂಹಿಕ ಅಸಹಕಾರದಿಂದ ವಿಜಯಸಾಧಿಸುವುದೇ ಆಗಿದ್ದಿತು. ಆದರೆ ಅದುವರೆಗೆ ಬ್ರಿಟಿಷರು ರೂಪಿಸಿದ್ದ ಆಡಳಿತ ವ್ಯವಸ್ಥೆಯೇ ಮುಂದುವರಿಯಿತಲ್ಲದೆ ರಾಜಕೀಯ ಆರ್ಥಿಕ ಕ್ಷೇತ್ರಗಳಲ್ಲಿ ಯಾವ ಬುಡಮಟ್ಟ ಬದಲಾವಣೆಯೂ ಆಗಲಿಲ್ಲ. ಇದರಿಂದಾಗಿ ಈ ಆಂದೋಲನ ಎರಡು ಕಾರಣಗಳಿಂದಲೂ ಕ್ರಾಂತಿ ಎನ್ನಿಸಿಕೊಳ್ಳುವುದಿಲ್ಲ. ಆಂದೋಲನವೆಂದೇ ಕರೆಸಿ ಕೊಳ್ಳುತ್ತದೆ. 1. ದೇಶಕ್ಕೆ ದೇಶವೇ ಭಾಗವಹಿಸಿ ಕಗ್ಗೊಲೆ, ಯುದ್ಧ, ರಕ್ತಪಾತ ಸಂಭವಿಸುವುದು ಕ್ರಾಂತಿಯ ಅರ್ಥ ಪರಿವಲಿಯಕ್ಕೆ ಬರುತ್ತದೆ. 2. ವ್ಯವಸ್ಥೆಯನ್ನು

ಪೂರ್ಣವಾಗಿ ಬದಲಿಸಿ ಅದಕ್ಕಿಂತ ಬೇರೆಯಾದ ಮತ್ತೊಂದು ವ್ಯವಸ್ಥೆ ತರುವುದು ಕೂಡ ಕ್ರಾಂತಿ. ನಮ್ಮ ಭಾರತದ ಸ್ವಾತಂತ್ರ್ಯ ಸಂಗ್ರಾಮ ಕಾಲದಲ್ಲಿ ಈ ಎರಡು ಸಂಭವಿಸದೇ ಇದ್ದುದರಿಂದ ಅದು ಆಂದೋಲನವೇ ಆಗಿದೆ. ಈ ಆಂದೋಲನ ಸಾಮಾಜಿಕ, ರಾಜಕೀಯ, ಆರ್ಥಿಕ ಕ್ಷೇತ್ರದಲ್ಲಿ ಬೀರಿದ ಪ್ರಭಾವ ತುಂಬ ಸೀಮಿತವಾಗಿದೆ. ಅದೇ 1917ರ ರಷಿಯಾದ ಕ್ರಾಂತಿ ಬೀರಿದ ಪ್ರಭಾವ ಈ ಮಿತಿಯನ್ನು ದಾಟಿ ಹಬ್ಬಿದ್ದಾಗಿದೆ.

ಕ್ರಾಂತಿ ಎಂದಾಗ ನಾವು ಯಾವ ಕಾರಣದಿಂದಲೂ ಅದನ್ನು ಯುದ್ಧ ರಕ್ತಪಾತದಿಂದ ಬೇರ್ಪಡಿಸಿ ಮಾತನಾಡಲು ಬರುವಂತಿಲ್ಲ. ಅಷ್ಟರ ಮಟ್ಟಿಗೆ ರಕ್ತಪಾತಕ್ಕೂ ಕ್ರಾಂತಿಗೂ ಸಂಬಂಧ ಇದೆ[4]. ಮತ್ತು ಈ ಬೆಳವಣಿಗೆ ಮುಂದುವರಿದು ಬಲಾತ್ಕಾರದಿಂದಲಾದರೂ ಹೊಸ ವ್ಯವಸ್ಥೆ ಸ್ಥಾಪಿಸುತ್ತದೆ. ಆಂದೋಲನ ಈ ಯಾವ ಪರಿವಲಯಕ್ಕೂ ಹರಡುವುದಿಲ್ಲ. ಅದು ಒಂದು ರೀತಿಯಲ್ಲಿ ಹೆಚ್ಚು ನಾಗರಿಕವಾದದ್ದು. ಸಾಂಸ್ಕೃತಿಕ ಒತ್ತಡಗಳಿಂದ ಧಾರ್ಮಿಕ ಪ್ರಭಾವ ಉಳ್ಳದ್ದು. ಅಲ್ಲಿನ ನಾಯಕರು ಒರಟು ಮತ್ತು ಬಂಡಾಯ ಗುಣಗಳಿಂದ ಹೊರತಾಗಿ ತಾಳ್ಮೆಯಿಂದ, ಶಾಂತಿಯಿಂದಿದ್ದು ವಿಜಯ ಸಾಧಿಸುವವರಾಗಿರುತ್ತಾರೆ.

ವಿಶ್ವಕೋಶಕಾರ[5] ಕ್ರಾಂತಿಯನ್ನು ಎರಡು ರೀತಿಯಲ್ಲಿ ಅರ್ಥಯಿಸುತ್ತಾನೆ. 1. ಆಡಳಿತ ವ್ಯವಸ್ಥೆಯ ಹಸ್ತಾಂತರ ಮಾತ್ರವೇ ಅಲ್ಲದೆ ರಾಜಕೀಯ, ಸಾಂಸ್ಕೃತಿಕ ಆರ್ಥಿಕ ರಂಗದಲ್ಲೂ ಬದಲಾವಣೆ ತರುವುದು. 2. ಕೇವಲ ರಾಜಕೀಯ ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿ ಅಧಿಕಾರ ಪಡೆಯುವುದು. ರಾಜಕೀಯ ವ್ಯವಸ್ಥೆಯಲ್ಲಿ ಕೆಲವು ಸುಧಾರಣೆ ತರುವುದು. ಅವನ ಈ ನಿರ್ಣಯವನ್ನು ಒಪ್ಪ ಬಹುದಾಗಿದೆ. ಮತ್ತೊಬ್ಬ ವಿಶ್ವ ಕೋಶಕಾರ[6] ರಾಜಕೀಯ ವಿಜ್ಞಾನಿಗಳನ್ನು ಬೆಂಬಲಿಸಿ ಯಾವುದು ಕ್ರಾಂತಿ ? ಯಾವುದು ಬಂಡಾಯ ? ಯಾವುದು ದಂಗೆ ? ಎಂಬುದನ್ನು ನಿರ್ಣಯಿಸುತ್ತಾನೆ. ಮೇಲೆಯೇ ತಿಳಿಸಿದಂತೆ ರಾಜಕೀಯವಾಗಿ ಉಂಟಾಗುವ ಯುದ್ಧ ಅಧಿಕಾರ ಹಸ್ತಾಂತರದಲ್ಲಿ ಮಾತ್ರ

4. ದಿ ನ್ಯೂ ಎನ್‌ಸೈಕ್ಲೋಪೀಡಿಯ ಬ್ರಿಟಾನಿಕ (ಮಾಕ್ರೋಪೀಡಿಯ) ಸಂಪುಟ 15, ರೆವಲೂಷನ್ ನೋಡಿ
5. ಅದೇ, ರೆವಲೂಷನ್ ನೋಡಿ.
6. ದಿ ವರ್ಲ್ಡ್ ಬುಕ್ ಎನ್‌ಸೈಕ್ಲೋಪೀಡಿಯ, ಸಂಪುಟ 16, ಪುಟ 186.

ಪರ್ಯವಸಾನವಾಗುವುದನ್ನು ದಂಗೆ ಅಥವಾ ರೆವೋಲ್ಟ್ ಎಂದು ಕರೆಯುತ್ತಾನೆ. ಯಾವುದು ಅಧಿಕಾರ ಹಸ್ತಾಂತರದಲ್ಲಿ ಮಾತ್ರ ಪರ್ಯವಸಾನವಾಗದೆ ಅದರಾಚೆಗೂ ದಾಟುತ್ತದೆಯೋ ಅದು ಕ್ರಾಂತಿ ಎನ್ನಿಸಿಕೊಳ್ಳುತ್ತದೆ.

**ಸುಧಾರಣೆಯ ಅರ್ಥವ್ಯಾಪ್ತಿ**

ರೆಫರ್‌ಮೇಷನ್ ಪದವನ್ನು ಸುಧಾರಣೆಗೆ ಸಮಾನವಾಗಿ ಬಳಸಲಾಗುತ್ತಿದೆ. ರೆವಲೂಷನ್ ಪದವನ್ನು ಕೇವಲ ರಾಜಕೀಯ ಕ್ಷೇತ್ರಕ್ಕೆ ಮಾತ್ರ ಸಂಬಂಧಿಸಿ ಕರೆಯುವಂತೆ ರೆಫರ್‌ಮೇಷನ್ ಪದವನ್ನು ಧಾರ್ಮಿಕ ಕ್ಷೇತ್ರಕ್ಕೆ ಮಾತ್ರ ಸಂಬಂಧಿಸಿ ಕರೆಯುವುದು ರೂಢಿಯಲ್ಲಿದೆ. ಅಷ್ಟರ ಮಟ್ಟಿಗೆ ಪದಗಳ ಬಳಕೆ ನಿರ್ದಿಷ್ಟವಾಗಿದೆ. ಪಾಶ್ಚಾತ್ಯ ದೇಶದ ಎಲ್ಲ ವಿಶ್ವಕೋಶಕಾರರೂ ಮತ್ತು ಅರ್ಥಕೋಶಕಾರರೂ ರೆಫರ್‌ಮೇಷನ್ ಎಂದ ಕೂಡಲೆ ಧಾರ್ಮಿಕ ಪರಿವಲಯದ ಸುಧಾರಣೆಗಳಿಗೆ ಸಂಬಂಧಿಸಿದಂತೆ ಮಾತನಾಡುತ್ತಾರೆ. ಜರ್ಮನಿಯಲ್ಲಿ ಮಾರ್ಟಿನ್ ಲೂಥರ್ ತಂದ ಧಾರ್ಮಿಕ ಆಂದೋಲನವನ್ನು ಈ ಅಧ್ಯಾಯದಲಿಯೇ ಪ್ರಸ್ತಾಪಿಸಿ ಮಾತನಾಡುತ್ತಾರೆ. ರೆವಲೂಷನ್ ಹೇಗೆ ರಾಜಕೀಯದ ಜೊತೆಗೆ ಧಾರ್ಮಿಕ, ಸಾಂಸ್ಕೃತಿಕ, ಆರ್ಥಿಕ ಕ್ಷೇತ್ರಗಳಲ್ಲಿ ಪ್ರಭಾವ ಬೀರುತ್ತದೆಯೋ ಹಾಗೆ ಧಾರ್ಮಿಕ ಆಂದೋಲನವು ಧಾರ್ಮಿಕ ಕ್ಷೇತ್ರದಾಚೆಗೂ ಪ್ರಭಾವ ಬೀರಿ ಸುಧಾರಣೆಯನ್ನು ತರಬಲ್ಲುದು. ಆದರೆ ಧರ್ಮ ಒಂದೇ ರಾಜಕೀಯ ಸಂಬಂಧವಿಲ್ಲದೆ ಇತರ ಕ್ಷೇತ್ರಗಳ ಮೇಲೆ ಪ್ರಭಾವ ಬೀರಲಾರದು.

ಧಾರ್ಮಿಕ ಆಂದೋಲನ ಜೀವನದ ಸಾಮಾಜಿಕ, ಸಾಂಸ್ಕೃತಿಕ ಸಂಬಂಧಗಳನ್ನು ಪಡೆದದ್ದು. ಅದರಿಂದಾಗಿ ಅದು ಉಂಟಾದರೆ ಈ ರಂಗಗಳಲ್ಲಿ ಮಾತ್ರ ಸುಧಾರಣೆ, ಪ್ರಗತಿಯನ್ನು ತರಬಲ್ಲುದು. ಧಾರ್ಮಿಕ ಆಂದೋಲನ, ರಾಜಕೀಯ ಹೊರತಾಗಿ ಉಂಟಾಗುವ ಸಾಧ್ಯತೆ ಇರುವುದರಿಂದ ರಾಜಕೀಯ ಕ್ಷೇತ್ರದೊಂದಿಗೆ ಇದರ ಸಂಬಂಧ ಇಲ್ಲದಿರುವುದರಿಂದ ಆ ಮಟ್ಟಿಗೆ ಆಂದೋಲನದ ಪ್ರಭಾವದ ವ್ಯಾಪ್ತಿ ಮಿತಿಗೊಳ್ಳುತ್ತದೆ. ರಾಜಕೀಯ ಮತ್ತು ಧಾರ್ಮಿಕ ಇವು ಒಂದಕ್ಕೊಂದು ಪೂರಕ ಸಂಬಂಧ ಪಡೆದವುಗಳಲ್ಲವಾದರೂ ಒಂದರಿಂದ ಮತ್ತೊಂದಕ್ಕೆ ಬೆಂಬಲ ದೊರೆತಾಗ ಆಂದೋಲನದ ವ್ಯಾಪ್ತಿ

ಹೆಚ್ಚುತ್ತದೆ. ಇವು ಪರಸ್ಪರ ಸಮಾನವಾದವುಗಳಾದರೂ ಕೆಲವು ಸಂದರ್ಭದಲ್ಲಿ ಧರ್ಮ ರಾಜಕೀಯದ ಮೇಲೂ ಪ್ರಭಾವ ಬೀರುವ ಸಾಧ್ಯತೆ ಇದೆ. ಅದೇ ರಾಜಕೀಯ, ಧರ್ಮದ ಮೇಲೆ ಪ್ರಭಾವ ಬೀರಲಾರದು. ಆದರೆ ಇದು ಅದರೊಂದಿಗೆ ಹೊರತಾದಾಗ ಧರ್ಮದ ವ್ಯಾಪ್ತಿಯನ್ನು ಕಡಿಮೆಗೊಳಿಸ ಬಹುದು. ರಾಜಕೀಯ ಕ್ಷೇತ್ರ ಆರ್ಥಿಕ ಹಿಡಿತವುಳ್ಳದ್ದಾಗಿರುವುದರಿಂದ ಇದರ ಆಂದೋಲನ ಧರ್ಮಕಿಂತ ಹೆಚ್ಚು ಎದ್ದು ಕಾಣುವಂತೆ ನಡೆಯಬಲ್ಲದು. ಧರ್ಮಕ್ಕೂ ಆರ್ಥಿಕ ವ್ಯವಸ್ಥೆಗೂ ಯಾವ ಸಂಬಂಧ ಹಿಡಿತಗಳು ಇಲ್ಲ. ಹೀಗಾಗಿ ಧಾರ್ಮಿಕ ಆಂದೋಲನ ಆರ್ಥಿಕ ಬೆಂಬಲವಿಲ್ಲದಾಗ ಸೊರಗಬಹುದು. ವ್ಯಕ್ತಿಯೊಬ್ಬ ಧರ್ಮ ತಿರಸ್ಕರಿಸಿಯೂ ಕ್ರಾಂತಿ ಆಂದೋಲನ ತರಬಲ್ಲ. ಆತ ಧರ್ಮವನ್ನು ಅಲ್ಲಗಳೆದು ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳ ಅಧ್ಯಯನ ಮಾಡಿ ಅದರ ಫಲವಾಗಿ ಕ್ರಾಂತಿ ತರಬಲ್ಲ. ಪ್ರಗತಿ ಸಾಧಿಸಬಲ್ಲ, ಅದು ಎದ್ದು ಕಾಣುವಂತೆಯೂ, ವೈಜ್ಞಾನಿಕವಾದುದು ಇರಬಲ್ಲುದು. ಅದೇ ಧರ್ಮ ರಾಜಕೀಯ, ಆರ್ಥಿಕ ಕ್ಷೇತ್ರಗಳ ಬೆಂಬಲವಿಲ್ಲದೆ ಪ್ರಗತಿ ತರಲಾರದು. ಒಂದು ಪಕ್ಷ ಅದರ ಬೆಂಬಲ ಪಡೆದೂ ಅದು ತರುವ ಸುಧಾರಣೆ ಅವೈಜ್ಞಾನಿಕವೂ, ಅಸಮರ್ಪಕವೂ ಆದುದಾಗಿರಬಹುದು.

ಸುಧಾರಣೆ ವ್ಯವಸ್ಥೆಯೊಂದನ್ನು ಪರಿಷ್ಕರಣಗೊಳಿಸುತ್ತದೆ. ಈ ಪರಿಷ್ಕರಣ ಕ್ರಿಯೆ ಯಾವ ಕ್ಷೇತ್ರದಲ್ಲಿ ಬೇಕಾದರೂ ಆಗಬಹುದು. ಸುಧಾರಣೆಯನ್ನು ಆಂದೋಲನವೂ ತರಬಹುದು, ಚಳುವಳಿಯೂ ತರಬಹುದು. ಚಳುವಳಿ ಸುಧಾರಣೆ ತಂದಾಗ ಅದು ಒಂದು ಕ್ಷೇತ್ರಕ್ಕೆ ಮಾತ್ರ ಸೀಮಿತ ಆಗುತ್ತದೆ. ಆಂದೋಲನ ಸುಧಾರಣೆ ತಂದಾಗ ಅದು ಒಂದು ಕ್ಷೇತ್ರದಲ್ಲಿ ಮಾತ್ರವಲ್ಲದೆ ಇನ್ನೊಂದು ಕ್ಷೇತ್ರದಲ್ಲೂ ಸುಧಾರಣೆ ತರುತ್ತದೆ. ಜೆ. ಪಿ. ಚಳುವಳಿ ತಂದ ಸುದಾರಣೆ ರಾಜಕೀಯ ರಂಗಕ್ಕೆ ಮಾತ್ರ ಸೀಮಿತವಾದದ್ದು. ಅದೇ ಲೂಥರ್ ಆಗಲಿ, ಬಸವಣ್ಣ ಆಗಲಿ, ಗೌತಮ ಬುದ್ಧನಾಗಲಿ ತಂದ ಸುಧಾರಣೆ ಕೇವಲ ಧಾರ್ಮಿಕ ಕ್ಷೇತ್ರದಲ್ಲಿ ಮಾತ್ರ ಪರಿಮಿತಗೊಳ್ಳಲಿಲ್ಲ. ಸಾಹಿತ್ಯ ಸಾಂಸ್ಕೃತಿಕ, ಆರ್ಥಿಕ ರಂಗದಲ್ಲೂ ಪ್ರಭಾವ ಬೀರಿತು.

ರೆವಲೂಷನ್ ರಾಜಕೀಯ, ಸಾಂಸ್ಕೃತಿಕ, ಆರ್ಥಿಕ ರಂಗದ ಮೇಲೂ ಪ್ರಭಾವ ಬೀರುವ ಹಾಗೆ ರೆಫರ್ ಮೇಷನ್ ಕೂಡ ಪ್ರಭಾವ ಬೀರ ಬಲ್ಲುದು ಎಂಬ ಸಾಧ್ಯತೆಯನ್ನು ನೆನಪಿನಲ್ಲಿಡಬೇಕು.

**ಆಂದೋಲನದ ಉಗಮ–ಕಾರಣಗಳು :**

ಸ್ಥಾಪಿತವಾಗಿರುವ ವ್ಯವಸ್ಥೆಯೊಂದರ ಬಗೆಗಿನ ಅತೃಪ್ತಿಯೇ ಆಂದೋಲನದ ಉಗಮಕ್ಕೆ ಕಾರಣ ಆಗುತ್ತದೆ. ಆದರೆ ಈ ಅತೃಪ್ತಿಯ ಪ್ರಮಾಣ ಎಷ್ಟು? ಎಂಬುದರ ಮೇಲೆ ಆಂದೋಲನ ಉಂಟಾಗುವುದು ಬಿಡುವುದು ಅವಲಂಬಿಸಿರುತ್ತದೆ. ಎಲ್ಲ ಆಂದೋಲನಗಳು ಚಳುವಳಿಯ ಮುಂದುರಿದ ಹೆಜ್ಜೆಗಳು. ಚಳುವಳಿ ಹೆಚ್ಚೆಚ್ಚು ವ್ಯಾಪಕ ಆದಂತೆ ಆಂದೋಲನದ ಸ್ವರೂಪ ಪಡೆಯುತ್ತದೆ. ಇರುವ ವ್ಯವಸ್ಥೆಯಿಂದ ನಲುಗಿ ಹೋದ ಜನತೆ ತಮ್ಮ ಅತೃಪ್ತಿ ಅಸಮಾಧಾನಗಳನ್ನು ವ್ಯಕ್ತಪಡಿಸುತ್ತಾರೆ. ಯಾವಾಗ ಅನ್ಯಾಯದ ಪ್ರಮಾಣ ಉಸಿರು ಕಟ್ಟಿಸುವಷ್ಟು ಹೆಚ್ಚುವುದೋ ಆಗ ಬಹುಬೇಗ ಚಳುವಳಿಯ ಸ್ವರೂಪ ಪಡೆಯುತ್ತದೆ. ಮುಷ್ಕರ, ಸಂಪು ಇತ್ಯಾದಿಗಳು ಸಂಭವಿಸುವುದೂ ಹೀಗೆಯೇ. ಇವು ಯಾವುದೇ ಒಂದು ಸಣ್ಣ ಪರಿವಲಯದಿಂದ ಹಿಡಿದು ದೊಡ್ಡ ಕ್ಷೇತ್ರದ ವರೆಗೂ ವ್ಯಾಪಿಸಿರಬಹುದು.

1947ರ ಸ್ವಾತಂತ್ರ್ಯ ಸಂಗ್ರಾಮದ ಹಿಂದಿನ 1857ರ ಸಿಪಾಯಿ ದಂಗೆ ಆಂದೋಲನದ ಪೂರ್ವಘಟ್ಟ. ಸ್ವಾತಂತ್ರ್ಯ ಸಂಗ್ರಾಮಸಂದರ್ಭದಲ್ಲಿ ಆಂದೋಲನ ಉಂಟಾದದ್ದು ಯಾಕೆ? ವಿದೇಶೀಯರು ಬಂದು ದೇಶೀಯರನ್ನು ಸುಲಿಗೆ ಮಾಡುತ್ತಿದ್ದಾರೆ. ನಮ್ಮ ದೇಶದಲ್ಲಿಯೇ ನಮಗೆ ಸೌಲಭ್ಯಗಳಿಗೆ ಕೈಚಾಚಬೇಕಿದೆ. ಮನೆಯಮಗನಿಗೆ ಮನೆಯಲ್ಲಿಯೇ ಊಟ ಹಾಕದಂತಹ ಪರಿಸ್ಥಿತಿ ಇದು ಪ್ರತಿಯೊಬ್ಬ ಪ್ರಜೆಯೂ ಪೂರ್ಣಶೋಷಣೆಗೆ ಗುರಿಯಾಗಿದ್ದಾನೆ. ದುಡಿದು ದುಃಖಪಡುವವನು ಇವನಾದರೆ ಉಂಡು ಸುಖಪಡೆಯುವುದಕ್ಕೆ ಅವನು. ಇದರಿಂದಾಗಿ ಈ ಎಲ್ಲ ವಿದ್ಯಮಾನಗಳನ್ನು ಅರಿತ ಜನತೆ ಪ್ರತಿಭಟನೆ, ವಿರೋಧ, ಚಳುವಳಿ, ಅಸಹಕಾರದ ಮೂಲಕ ತಮ್ಮ ಆಂದೋಲನವನ್ನು ಸಾರಿದರು.

ಆಂದೋಲನ ವ್ಯಕ್ತವಾಗುವುದು ಘೋಷಣೆಗಳಿಂದ ಘೋಷಿತ ಆಚರಣೆಗಳಿಂದ. 'ಬ್ರಿಟಿಷರೇ ಭಾರತಬಿಟ್ಟು ತೊಲಗಿ, ವಿದೇಶೀ ವಸ್ತುಗಳನ್ನು ಬಹಿಷ್ಕರಿಸಿ, ಸ್ವದೇಶಿ ವಸ್ತುಗಳನ್ನು ಪುರಸ್ಕರಿಸಿ, ವಂದೇ ಮಾತರಂ, ಭಾರತ ನಮ್ಮದು' ಇತ್ಯಾಧಿ ಘೋಷಣೆಯೂ, ಆ ಮೂಲಕ ಅಸಹಕಾರ ಆಚರಣೆಯೂ ಬೆಳೆಯಿತು. ಈ ಘೋಷಣೆಗಳು ಇಡೀ ದೇಶದಾದ್ಯಂತ ವ್ಯಾಪಿಸಿ ಎಲ್ಲ ಜನರು ಅದರಂತೆ ನಡೆದುದರಿಂದ ಅಸಹಕಾರದಲ್ಲಿ ದುಮುಕಿದುದರಿಂದ ಆಂದೋಲನದ ಸ್ವರೂಪ ಪಡೆಯಿತು.

ಬ್ರಿಟಿಷರ ವಿರುದ್ಧ ಅಸಹಕಾರ ವ್ಯಕ್ತವಾದದ್ದು ಈ ಕಾರಣಗಳಿಗಾಗಿ. 1. ರಾಜಕೀಯ ದಬ್ಬಾಳಿಕೆ ಮತ್ತು ಅೂರ ಪ್ರಭುತ್ವ. 2. ಧಾರ್ಮಿಕ ಕ್ಷೇತ್ರದ ಮೇಲೆ ಕ್ರೈಸ್ತಧರ್ಮದ ಧಾಳಿ. 3. ಸಾಮಾಜಿಕ ಸ್ಥಾನಮಾನಗಳಲ್ಲಿ ಸಮಾನ ಅವಕಾಶಗಳಿಲ್ಲ. ಸಾಂಸ್ಕೃತಿಕವಾಗಿ ಕ್ರೈಸ್ತಮತ, ತತ್ವಗಳನ್ನು ಒಂದೊಂದೇ ಒಂದೊಂದೇ ಹೇರಲಾಗುತ್ತಿದೆ. 4. ಈ ಎಲ್ಲ ಕ್ಷೇತ್ರಗಳಲ್ಲಿ ದಾಸ್ಯಭಾವನೆಯಿಂದ ದಿನ ನೂಕಬೇಕಾದದ್ದು. ಇವೆಲ್ಲವುಗಳನ್ನು ಪಡೆಯುವ ಸಲುವಾಗಿ ಆಂದೋಲನ ಉಂಟಾಯಿತು.

ಆಂದೋಲನಗಳ ಅಧ್ಯಯನದಿಂದ ಇಂತದೇ ಕಾರಣಕ್ಕಾಗಿ ಆಂದೋಲನ ಸಂಭವಿಸಿತೆಂದು ನಿರ್ದಿಷ್ಟವಾಗಿ ಹೇಳಲು ಬರುವುದಿಲ್ಲ. ಯಾವುದೇ ನಿರ್ದಿಷ್ಟ ಕಾರಣಗಳು ಕೂಡ ಆಂದೋಲನಕ್ಕೆ ಪ್ರೇರಣೆಯಾಗಿರುವುದಿಲ್ಲ. ಕಾರಣಗಳು ಒಂದಕ್ಕೊಂದು ತಳುಕು ಹಾಕಿಕೊಂಡು ಆಂದೋಲನಕ್ಕೆ ಸಿದ್ಧತೆ ನಡೆಸುತ್ತಿರುತ್ತವೆ. ಎಲ್ಲ ಆಂದೋಲನಗಳಿಗೂ ಇಂಥದೇ ಕಾರಣ ಎಂದು ಹೇಳಲು ಬರುವುದಿಲ್ಲ. ಯಾಕಂದರೆ ಪ್ರತಿಯೊಂದು ಆಂದೋಲನವೂ ಬೇರೆ ಬೇರೆ ಕಾರಣಗಳಿಂದಾಗಿ ಸಂಭವಿಸಿರುತ್ತವೆ. ಸಾಧರಣೀಕರಿಸಿ ಹೇಳುವುದಾದರೆ ಸಮಾನತೆ, ಸ್ವಾತಂತ್ರ್ಯ, ಭದ್ರತೆ ಅಥವಾ ರಕ್ಷಣೆ, ನ್ಯಾಯ[7] ಇವು ಕಾರಣವಾಗಿ ಆಂದೋಲನಗಳು ಸಂಭವಿಸುತ್ತವೆ. ಅಲ್ಲದೆ ಒಂದು ಆಂದೋಲನ ಇನ್ನೊಂದು ಆಂದೋ

7. The New Encyclopaedia Britanica, Macropaedia, Vol. 15, P. 790.

ಲನಕ್ಕೂ ಪ್ರೇರಣೆ ನೀಡಬಹುದು. ಭಾರತದ ಸ್ವಾತಂತ್ರ್ಯ ಸಂಗ್ರಾಮ ಏಷಿಯ ಮತ್ತು ಆಫ್ರಿಕಾ ಖಂಡಗಳ ಮೇಲೆ ಪ್ರಭಾವಬೀರಿತು. 1788ರಲ್ಲಿ ರಷಿಯಾದಲ್ಲಿ ಉಂಟಾದ ಭೀಕರ ಕ್ಷಾಮದಿಂದಾಗಿ ಅಲ್ಲಿ ಉಂಟಾದ ಆಂದೋಲನದಿಂದ 1789 ರಲ್ಲಿ ಮಹಾ ಆಂದೋಲನ ಸಂಭವಿಸಿತು. 1830 ರಲ್ಲಿ ಫ್ರಾನ್ಸ್‌ನಲ್ಲಿ ಸಂಭವಿಸಿದ ಯುದ್ಧ ಮತ್ತು ಆಂದೋಲನಗಳು ಬೆಲ್ಜಿಯಂ ಮತ್ತು ಪೋಲೆಂಡ್ ದೇಶಗಳ ಮೇಲೆ ಪ್ರಭಾವ ಬೀರಿತು. 1820ರಲ್ಲಿ ಸ್ಪೇನ್‌ನಲ್ಲಿ ಸಂಭವಿಸಿದ ಆಂದೋಲನ ಪೋರ್ಚುಗಲ್ ಮತ್ತು ನೇಪಲ್ಸ್‌ದೇಶಗಳಿಗೆ ಸ್ಫೂರ್ತಿ ನೀಡಿತು. 1917ರ ರಷಿಯದ ಆಂದೋಲನದಿಂದಾಗಿ ಪ್ರಪಂಚದ ಹಲವು ಕಡೆ ಮಹತ್ವದ ಪ್ರಭಾವ ಆಯಿತು. ಯುದ್ಧ ಮತ್ತು ಆಂದೋಲನಗಳು ಈ ಕಾರಣವಾಗಿ ಉಂಟಾದವು. ಈ ಸಂದರ್ಭದಲ್ಲಿ ಅಧಿಕಾರ ದಾಹದಿಂದ ಉಂಟಾದ ಒಂದು ಮತ್ತು ಎರಡನೇ ಮಹಾಯುದ್ಧಗಳನ್ನು ಇಲ್ಲಿ ನೆನೆಯಬಹುದು. ಈ ಯುದ್ಧಗಳಿಂದ ಅನೇಕ ರಾಷ್ಟ್ರಗಳ ಆಡಳಿತ ವ್ಯವಸ್ಥೆ ಬದಲಾಯಿತು.

ಒಂದು ದೇಶದ ಆಂದೋಲನ ಅಥವಾ ಕ್ರಾಂತಿಯಿಂದ ಮತ್ತೊಂದು ದೇಶದ ಆಂದೋಲನ ಅಥವಾ ಕ್ರಾಂತಿ ಸ್ಫೋಟನೆಗೊಳ್ಳ ಬೇಕಾದರೆ ಕೆಲವು ಸಮಾನ ಅಂಶಗಳು ಕಾರಣವಾಗಿರುತ್ತವೆ.ಉದಾಹರಣೆಗೆ ಭಾರತದ ಸ್ವಾತಂತ್ರ್ಯದ ಆಂದೋಲನ ಕಾಲದಲ್ಲಿ ದಾಸ್ಯದಿಂದ ಮುಕ್ತರಾಗುವುದು, ಸಮಾನ ಅವಕಾಶ ಪಡೆಯುವುದು, ತಮ್ಮ ದೇಶವನ್ನು ತಾವೇ ಆಳುವುದು. ತಮ್ಮ ಕುಟುಂಬ ಜೀವನಕ್ಕೆ ಭದ್ರತೆ ಒದಗಿಸುವುದು ಇತ್ಯಾದಿ ಕಾರಣ ಆದವು. ಈ ಆಂದೋಲನದಿಂದ ಪ್ರೇರಣೆಪಡೆದ ಆಫ್ರಿಕಾಖಂಡ ಕೂಡ ದಾಸ್ಯದಿಂದ ನರಳುತ್ತಿತ್ತು. ಜೀವನದಲ್ಲಿ ಅಭದ್ರತೆ, ಸಮಾನತೆಯ ಸುಳಿವಿಲ್ಲದೆ ಶೋಷಣೆಯಿಂದ ರೋಸಿಹೋಗಿತ್ತು. ತನ್ನಂತೆಯೇ ಶೋಷಿತವಾಗುತ್ತಿದ್ದ ಜನತೆ ಪ್ರಭುತ್ವದ ವಿರುದ್ಧ ಅಸಹಕಾರ ಚಳುವಳಿ ವ್ಯಕ್ತಪಡಿಸಿ ಜಯಸಾಧಿಸಿದುದು ಆಫ್ರಿಕಾದೇಶಕ್ಕೆ ದಾರಿದೀಪ ಆಯಿತು. ಭಾರತ ಸ್ವಾತಂತ್ರ್ಯ ಪಡೆದ ಸೊಡರಿನ ಬೆಳಕಿನಲ್ಲಿ ಆಫ್ರಿಕಾ ಕೂಡ ನಡೆಯಬಹುದೆಂಬ ನಂಬಿಕೆ ಭದ್ರಗೊಂಡಿತು. ಆಂದೋಲನದ ಚಟುವಟಿಕೆಗಳು ಆರಂಭವಾದವು. ಬಹುಪಾಲು ದೇಶದ ಸ್ವಾತಂತ್ರ್ಯ ಸಂಗ್ರಾಮಗಳೆಲ್ಲ ಯುದ್ಧ

ರಕ್ತಪಾತದಿಂದ ಕೂಡಿದವುಗಳೇ ಆಗಿವೆ. ಅಪಾರ ಹಾನಿಯಿಂದಾಗಿ ತಮ್ಮ ಗುರಿ ಸಾಧಿಸಿಕೊಳ್ಳುತ್ತವೆ.

ಆಂದೋಲನಗಳು ಇನ್ನೂ ಕೆಲವು ಕಾರಣಗಳಿಗಾಗಿ ಸಂಭವಿಸುತ್ತವೆ. ಆಡಳಿತ ನಡೆಸುತ್ತಿರುವ ಅಧಿಕಾರಿಗಳು ಅಸಮರ್ಥರಾಗಿದ್ದರೆ,[8] ವಿಷಯ ಲೋಲುಪರಾಗಿದ್ದು ಅನೀತಿವಂತರಾಗಿದ್ದರೆ, ಇದರಿಂದಾಗಿ ದೇಶ ಅನಾಯಕತ್ವಕ್ಕೆ ಒಳಗಾಗುವ ಪರಿಸ್ಥಿತಿ ಒದಗಿ ಬಂದಿದ್ದರೆ ಆಂದೋಲನಗಳಾಗಲಿ, ಬಂಡಾಯ, ಯುದ್ಧಗಳಾಗಲಿ ಘಟಿಸುತ್ತವೆ. ಭಾರತದ ಚರಿತ್ರೆಯಲ್ಲಿ ಕಂಡುಬರುವ ರಾಜ್ಯಾಪಹರಣ ಇತ್ಯಾದಿಗಳು ಅಸಮರ್ಥ ರಾಜರಿದ್ದಾಗಲೇ ಸಂಭವಿಸಿದವು. ಈ ಸಂದರ್ಭದಲ್ಲಿ ದೇಶದ ಕೆಲವು ಪ್ರಮುಖರು ಆತನಿಗೆ ಬೆಂಬಲ ನೀಡಿ ರಾಜ್ಯಾಪಹರಣ ಯಶಸ್ವಿಯಾಗಲು ಸಹಾಯಕ ಆಗುತ್ತಾರೆ. ಬ್ರಿಟಿಷರು ಭಾರತ ಮತ್ತಿತರ ದೇಶಗಳನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡದ್ದಾದರೂ ಹೀಗೆಯೆ. ನಾಡಿನ ರಾಜರು ಪರಸ್ಪರ ಕಚ್ಚಾಡುವ ದೌರ್ಬಲ್ಯದಿಂದ ಇದ್ದಾಗ ಆ ಅವಕಾಶವನ್ನು ಬಳಸಿಕೊಂಡು ಬ್ರಿಟೀಷ್ ವಸಾಹತುಷಾಹಿಯು ಮೂಲಕ ಭಾರತವನ್ನೇ ತಮ್ಮ ಅಧೀನಕ್ಕೆ ತೆಗೆದುಕೊಂಡರು. ಇಲ್ಲಿ ಅನೇಕ ಯುದ್ಧ, ರಕ್ತಪಾತಗಳು ಸಂಭವಿಸಿದರೂ ಬ್ರಿಟಿಷರು ಪಡೆದ ಜಯ ಅತಿಸುಲಭವಾದುದಾಗಿತ್ತು. ನಾಡವರ ದೌರ್ಬಲ್ಯಗಳು ಅವರಿಗೆ ಈ ಪ್ರೇರಣೆ ನೀಡಿದ್ದವು.

ಬದುಕಿನ ಪ್ರತಿಯೊಂದು ಕ್ಷಣವೂ ಜನಗಳನ್ನು ಹಲವು ಹತ್ತು ಸಮಸ್ಯೆಗಳಿಂದ ಹೊತ್ತಿಉರಿಸುತ್ತಿದ್ದಾಗ ಆಂದೋಲನ ಅಥವಾ ಬಂಡಾಯ ನಡೆಯಲು ಒಳ್ಳೆಯ ಅವಕಾಶಗಳು.[9] ಆಡಳಿತಷಾಹಿಯ ಶೋಷಣೆಯಿಂದಾಗಿ ರಾಜ್ಯದಲ್ಲಿ ಬಡತನ, ದೌರ್ಜನ್ಯ, ಅನ್ಯಾಯ, ಲಂಚಗುಳಿತನಗಳು ಮಿತಿಮೀರಿ ಪ್ರಜೆಗಳಿಗೆ ಯಾವ ರಕ್ಷಣೆಯೂ ಇಲ್ಲದಾಗ ಸಮಯಬಂದಾಗ ಚಿಲುಮೆ ಬುಗ್ಗೆಯಿಂದ ಚಿಮ್ಮುವಂತೆ ಆಂದೋಲನಗಳು ಉಂಟಾಗುತ್ತವೆ. ಈ ಸಂದರ್ಭದಲ್ಲಿ ಸರಿಯಾದ ನಾಯಕ ಆ ಚಿಲುಮೆ ನಿರಂತರವಾಗಿ ಹೊಮ್ಮಲು ದಾರಿಮಾಡಿಕೊಡುತ್ತಾನೆ. ಸಮಯ, ಸಂದರ್ಭಗಳೂ ವ್ಯಕ್ತಿಗೆ ಸ್ಫೂರ್ತಿ ನೀಡಿ ನಾಯಕನನ್ನು

8. The World Book Encyclopaedia, Vol. 16, (Macropaedia) Revolution ನೋಡಿರಿ.

9. ಅದೇ, ಪುಟ 251.

ಉಂಟುಮಾಡುತ್ತವೆ. ಜನತೆಯು ಆಶೋತ್ತರಗಳನ್ನು ಈಡೇರಿಸಬಲ್ಲ ನಾಯಕ ನಾಗುತ್ತಾನೆ. ಪ್ರಜೆಗಳ ಅತೃಪ್ತ ಬಯಕೆಗಳಿಗೆ, ದಮನಗೊಂಡ ಆಶೆಗಳಿಗೆ ಬಾಗಿಲು ತೆರೆಯುತ್ತಾನೆ. ಹಸಿವಿನಿಂದ ಅಳುವ ಮರಿಗಳಿಗೆ ತಾಯಿಹುಲಿ ಬೇಟೆ ಯಾಡಿ ಆಹಾರ ಒದಗಿಸುವಂತೆ ನಾಯಕ ಜನತೆಯನ್ನು ಹಿಂದಿಕ್ಕಿಕೊಂಡು ಆಂದೋಲನದಲ್ಲಿ ದುಮುಕುತ್ತಾನೆ. ರಷಿಯದ 1917ರ ಕ್ರಾಂತಿ ಸಂದರ್ಭ ದಲ್ಲಾದರೂ ಹೀಗೆಯೇ ಲೆನಿನ್ ತನ್ನ ಜನತೆಯ ಹೊತ್ತಿ ಉರಿಯುವ ಹಣತೆ ಗಳಿಗೆ ತೈಲವಾಗಿ ಬಂದ. ಯಾವತ್ತು ಆಂದೋಲನಗಳಾಗಲಿ, ಕ್ರಾಂತಿಗಳಾಗಲಿ ಸಮರ್ಥನಾಯಕನನ್ನು ಬೇಡುತ್ತವೆ. ದೈಹಿಕವಾಗಿ ಅಲ್ಲದಿದ್ದರೂ ಮಾನಸಿಕ ವಾಗಿಯಾದರೂ ಆತ ಹಿಮಾಲಯ ಸದೃಶಬಲವನ್ನು ಪಡೆದಿರಬೇಕಾಗುತ್ತದೆ. ಅವನ ಛಲ, ನಂಬಿಕೆಗಳು ಬೆಟ್ಟದಷ್ಟು ಸ್ಥಿರವಾಗಿರಬೇಕು. ರಷಿಯಾದ ಜನತೆ ಇಂತಹ ನಾಯಕನನ್ನೇ ಆರಿಸಿಕೊಂಡವು. ಪರಿಸ್ಥಿತಿಯ ಆಳ ಅಗಲಗಳನ್ನು ಅಧ್ಯಯನಮಾಡಿ ಜನತೆಯ ಬಲ್ಬುಗಳಿಗೆ ಆವರಿಸಿದ್ದ ಧೂಳು ಒರೆಸಿ ಪ್ರಕಾಶ, ಕ್ರಾಂತಿ ಹೊರಗೆ ಕಾಣುವಂತೆ ಮಾಡಿದ ಮಹಾನಾಯಕನಾದ.

ಕೇವಲ ಸಾಮಾಜಿಕ ಕಾರಣಗಳೊಂದೇ ದೊಡ್ಡ ಕ್ರಾಂತಿಯಾಗಿ ಂಭವಿ ಸುವುದಿಲ್ಲ. ಲೂಥರ್, ಬಸವಣ್ಣ, ಬುದ್ಧನ ಸಂದರ್ಭದಲ್ಲಿ ಆದದ್ದಾದ್ದರು ಹೀಗೆಯೇ. ಸಾಮಾಜಿಕ ಕಾರಣಗಳು ಇಡಿದೇಶದ ಜನತೆಯನ್ನು ದೀಪ್ತಗೊಳ್ಳಿ ಸುವುದಿಲ್ಲ. ಎಲ್ಲ ಜನತೆ ತೊಡಗದಿರುವುದೇ ಮೊದಲು ಕ್ರಾಂತಿಹಂತ ತಲುಪದಿ ರುವುದಕ್ಕೆ ಮುನ್ಸೂಚನೆಯಾಗುತ್ತದೆ. ಅಲ್ಲದೆ ಈ ಪರಿಸರದಲ್ಲಿ ಜನತೆ ಬದು ಕಲು ಇನ್ನು ಅವಕಾಶವಿರುವುದಷ್ಟೇ ಅಲ್ಲದೆ ರಾಜಕೀಯ, ಆರ್ಥಿಕ ಕ್ಷೇತ್ರಗಳು ಜನತೆಯನ್ನು ಅಷ್ಟು ಇಷ್ಟು ತೃಪ್ತಿಪಡಿಸುತ್ತಿರುತ್ತವೆ. ಇದರಿಂದಾಗಿ ಧಾರ್ಮಿಕ ಸಾಮಾಜಿಕ ಕಾರಣಗಳು ಮಾತ್ರ ಆಂದೋಲನಕ್ಕೆ ಕಾರಣ ಆಗುವುದಿಲ್ಲ.

ಸಮಯ ಬರದೆ ಯಾವತ್ತು ಆಂದೋಲನ, ಕ್ರಾಂತಿಗಳು ಸಂಭವಿಸುವು ದಿಲ್ಲ. ಒಂದು ಪಕ್ಷ ಕೆಲವು ಸ್ವಾರ್ಥಪರರೂ ಕ್ರಾಂತಿ, ಆಂದೋಲನವಾಗ ಬೇಕೆಂದು ತಹತಹಿಸಿದರೆ ಆಗ ಕ್ರಾಂತಿ ಸಂಭವಿಸುವುದಿಲ್ಲ. ಒಂದು ಸಣ್ಣ ದಂಗೆಯಾಗಿಯೋ ಅಥವಾ ಸಣ್ಣ ಚಳುವಳಿಯಾಗಿಯೋ ಪರಿಸಮಾಪ್ತಿಗೊಳ್ಳ

ತ್ತವೆ. ಇಂಥ ನಾಯಕರು ಹುಸಿ ಕ್ರಾಂತಿಕಾರಿಗಳು. ಇವರು ತಮ್ಮ ಸ್ವಾರ್ಥಕ್ಕೆ ಸಲುವಾಗಿ ಹುಯಿಲೆಬ್ಬಿಸುತ್ತಾರೆ. ತಾನೂ ಕ್ರಾಂತಿ ಕಾರಿಯೆಂತಲೂ, ತನಗೆ ಯಾವಸ್ವಾರ್ಥವೂ ಇಲ್ಲವೆಂತಲೂ, ನನ್ನ ಮುಂದಿನ ಜೀವನವನ್ನೆಲ್ಲಾ ಪ್ರಜೆಗಳ ಹಿತಕ್ಕಾಗಿ ಮೀಸಲಿಟ್ಟದೇನೆಂತಲೂ ಭಾಷಣಗಳನ್ನು ಚಚ್ಚುತ್ತಿರುತ್ತಾರೆ. ತಮ್ಮನ್ನು ತಾವು ಕ್ರಾಂತಿಕಾರಿಗಳೆಂದು ಕರೆದುಕೊಳ್ಳುವುದು ಜನತೆಯನ್ನು ತಮ್ಮತ್ತ ಸೆಳೆದು ಕೊಳ್ಳುವುದಕ್ಕಾಗಿ. ಹೀಗೆಂದು ತೊಡಗಿದಾಗಲಾದರು ಜನತೆ ತನ್ನ ಮೇಲೆ ವಿಶ್ವಾಸ ತಾಳಿ ತನ್ನ ಬೆನ್ನುಹಿಂದೆ ಬರಬಹುದೆಂದು ನಂಬಿರುತ್ತಾರೆ[10]. ಇಂಥ ಕೋವಿಗಳು ಡಂಡಂ ಶಬ್ದ ಮಾಡುತ್ತವೆ. ಆದರೆ ಈಡು ಹೊಡೆಯವುದಿಲ್ಲ. ಬದಲಾವಣೆಬೇಕು. ಯಾಕೆ? ತಾನು ಆಧಿಕಾರ ನಡೆಸುವುದಕ್ಕೆ.

ಗಮನಿಸ ಬೇಕಾದ ಸಂಗತಿಯೆಂದರೆ ಎಲ್ಲ ಆಂದೋಲನ, ಕ್ರಾಂತಿಗಳು ಪ್ರಗತಿಯನ್ನೇ ತರುತ್ತದೆಂದು ಹೇಳಲು ಬರುವುದಿಲ್ಲ[11]. ಆಂದೋಲನ ಆದನಂತರ ಬದುಕು ಇನ್ನಷ್ಟು ಅಸಹನೀಯವಾಗಬಹುದು. ಆಗ ಆಂದೋಲನ ಸಂಭವಿಸಿದ್ದು ಕೇವಲ ಹುತ್ತ ಬಡಿದಂತಾಗುತ್ತದೆ. ಯಾಕೆಂದರೆ ಹಾವು ಸತ್ತಿದ್ದರಿಂದ, ಜನತೆ ಹುತ್ತ ಬಡಿಯುವುದರಲ್ಲಿಯೇ ನಿರತರಾಗಿರಬೇಕಾಗುತ್ತದೆ. ಇಂತಹ ಸಂದರ್ಭದಲ್ಲಿ ಹಾವು ಸಾಯುವುದಿಲ್ಲ ಹುತ್ತ ಬಡಿಯುವುದು ತಪ್ಪುವುದಿಲ್ಲ. ಯಾಕೆಂದರೆ ಸಮಸ್ಯೆಯನ್ನು ಪೂರ್ಣ ಅಧ್ಯಯನ ಮಾಡಿ ಹಾವನ್ನು ಹೇಗೆ ಬಲಿ ಕೊಡಬೇಕೆಂದು ಇವರಿಗೆ ತಿಳಿದಿರುವುದಿಲ್ಲ. ಹೀಗಾಗಿ ಕರ್ನಾಟಕದ ಅಥವಾ ಭಾರತದ ಚರಿತ್ರೆಯು, ರಾಜರ ಇತಿಹಾಸವೆಲ್ಲವೂ ಪ್ರಜೆಗಳಿಂದ ಹುತ್ತ ಬಡಿಸುವುದರಿಂದ ತುಂಬಿಹೋಗಿದೆ. ಬಹುಶಃ ಹುತ್ತ ಬಡಿಯುವ ಮುನ್ನ ಹಾವು ಕೊಲ್ಲುವುದು ಹೇಗೆ ಎಂದು ಸಂಪೂರ್ಣವಾಗಿ ಅಧ್ಯಯನ ಮಾಡಿದವನೆಂದರೆ ಕಾರ್ಲ್‌ಮಾರ್ಕ್ಸ್. ಅದಕ್ಕಾಗಿ ಆತ ಚರಿತ್ರೆಯುನ್ನೆಲ್ಲ ಅಧ್ಯಯನ ಮಾಡಿ ಪರಿಹಾರ ಕಂಡು ಹಿಡಿದ. ಈತನ ಸೂತ್ರ ಬಳಸಿ

---

10. ಇವತ್ತು ಇಂದಿರಾಗಾಂಧಿ ಜನಗಳನ್ನು ತನ್ನ ಹಿಂದೆ ಸೆಳೆದುಕೊಳ್ಳುವುದಕ್ಕಾಗಿ ದೇಶವೆಲ್ಲಾ ದೌರ್ಜನ್ಯದಿಂದ ತುಂಬಿದೆ ಪ್ರಜೆಗಳಿಗೆ ರಕ್ಷಣೆಯೇ ಇಲ್ಲ. ಕ್ರಾಂತಿ ಆಗಬೇಕು. ನೀವೆಲ್ಲ ಇದರಲ್ಲಿ ಪಾಲುದಾರರಾಗಿರಿ ಎಂದು ಘೋಷಿಸುವುದನ್ನು ಇಲ್ಲಿ ನೆನೆಯಬಹುದು.

11. The Great Ideas, P 628, Quoted from Marx Works.

ಕೊಂಡ ಲೆನಿನ್ ಹುತ್ತ ಬಡಿಯಲಿಲ್ಲ ಅಗೆದ. ಹಾವು ಹೊರಬಂತು. ಕೊಂದು ಹಾಕಿದ. ಆ ಹುತ್ತ ಕಿತ್ತು ಹೊಸದಾದ ಭವ್ಯವ್ಯವಸ್ಥೆಯ ಬಂಗಲೆ ಕಟ್ಟಿದ. ಆದರೆ ನಂತರವಾದರೂ ಇಲ್ಲಿ ಆಗುತ್ತಿರುವುದೇನು ? ಮಧ್ಯಮವರ್ಗದ, ಕಾರ್ಮಿಕರ ಸವಲತ್ತಿನಿಂದ ಮೇಲೆ ಬಂದ ಅಧಿಕಾರಶಾಹಿಗಳು ಅವ್ಯವಸ್ಥೆಯನ್ನು ತಮ್ಮ ಸಲುವಾಗಿ ಹುತ್ತ ಮಾಡಿಕೊಳ್ಳುತ್ತಿದ್ದಾರೆ. ಇನ್ನು ;0 ಅಥವಾ ನೂರು ವರ್ಷಗಳಲ್ಲಿ ಅದು ದೊಡ್ಡ ಹುತ್ತವೇ ಆಗುತ್ತದೆ. ಆಗ ಇನ್ನೊಂದು ದಿಕ್ಕಿನ ಮಾರ್ಕ್ಸ್ ಅವಶ್ಯ ಆಗುತ್ತಾನೆ.

ಅದಕ್ಕೆ ಆಡಳಿತಾಧಿಕಾರಿಗಳು ಆಂದೋಲನದ ನಂತರವೂ ಬಂದರೆ ಮತ್ತೆ ಯುದ್ಧ ಅನಿವಾರ್ಯ. ಯಾಕೆಂದರೆ ಈತ ತನ್ನ ಅಧಿಕಾರದಾಶೆಗಾಗಿ ವಿರೋಧಿಗಳ ಬಯಕೆಗಳನ್ನು ಈ ಡೇರಿಸುತ್ತ ಕಾಲ ಹಾಕುತ್ತಾನೆ. ಇದರಿಂದ ದೇಶದಲ್ಲಿ ಹಲವು ವೈಪರೀತ್ಯಗಳು ಗೊಂದಲಗಳು ಉಂಟಾಗುತ್ತದೆ. ಬೇಸತ್ತ ಪ್ರಜೆಗಳು ಅದನ್ನು ನೋಡಿ ನೋಡಿ ಇಬ್ಬರನ್ನು ತೆಗೆದೊಗೆಯಲು ಮತ್ತೆ ಯುದ್ಧ ಸಾರುತ್ತಾರೆ. ತುರ್ತುಪರಿಸ್ಥಿತಿ ವಿರೋಧಿಸಿ ಬಂದ ಜನತಾ ಸರ್ಕಾರ ಅಪರಾಧಿಗಳನ್ನು ಶಿಕ್ಷಿಸಲಾರದೆ ಹಿಂಜರಿಯಿತು. ದೇಶಕ್ಕೆ ಕುತ್ತು ತಂದ ಜನತೆಯನ್ನು ಹಾಗೆಯೇಬಿಟ್ಟಿತು. ಅಲ್ಲದೆ ವಿರೊಧಿಗಳಿಗಾಗಿ ಅವರ ಆಶೋತ್ತರಗಳನ್ನು, ಕಳ್ಳಸಂತೆಕೋರರ ಬಲೆಗೆ ಬಿದ್ದಾಗ ಅವರ ಆಶೆಗಳನ್ನು ಈಡೇರಿಸುತ್ತಿದೆ. ಇದರಿಂದ ದೇಶದಲ್ಲಿ ಪ್ರಜೆಗಳಿಗೆ, ಸುಖಕರ ಬದುಕಿಗೆ ಮಾರಕ ಆಗುತ್ತಿದೆ. ಪರಿಸ್ಥಿತಿ ಹೀಗೆಯೇ ಮುಂದುವರಿದು ವಿಪರೀತ ಮುಟ್ಟಿದಾಗ ಮತ್ತೆ ದೇಶದಲ್ಲಿ ಚಳುವಳಿ ಉಂಟಾಗುಬಹುದು.

ಒಟ್ಟು ಹೀಗೆ ಹೇಳಬಹುದು, ಆದೋಲನ ಯಾವುದೇ ಕಾರಣದಿಂದ ಲಾದರೂ ಸಂಭವಿಸಬಹುದು. ಕೇವಲ, ಧಾರ್ಮಿಕ, ಸಾಮಾಜಿಕ ಕಾರಣಗಳು ಮಾತ್ರ ಕ್ರಾಂತಿ ತರಲಾರವು. ಒಂದು ದೇಶದ ಕ್ರಾಂತಿಯಿಂದ ಸ್ಫೂರ್ತಿಪಡೆದ ದೇಶಗಳು ತಮ್ಮ ದೇಶದಲ್ಲಿಯೂ ಅದೇಥರದ ಸಮಾನ ಅಂಶಗಳಿಂದ ಕೂಡಿರಬೇಕು. ಇಲ್ಲದಿದ್ದರೆ ಕ್ರಾಂತಿ ಆಗುವುದಿಲ್ಲ. ಅಲ್ಲದೆ ಎಲ್ಲ ಕ್ರಾಂತಿ, ಆಂದೋಲನಗಳು ಪ್ರಗತಿಯನ್ನೇ ತರುತ್ತವೆ ಎನ್ನುವಂತಿಲ್ಲ. ಪ್ರಗತಿ ತರದೆಯೂ ಇರಬಹುದು. ಕ್ರಾಂತಿ ಹೆಸರಿನಲ್ಲಿ ಹುಸಿ ಕ್ರಾಂತಿಕಾರಿಗಳು ಹುಟ್ಟಿಕೊಳ್ಳ

ಬಹುದು. ಕ್ರಾಂತಿಗೆ ತಕ್ಕ ಪರಿಸರವೂ ಬೇಕು. ತಕ್ಕನ್ಯಾಯ ಬೇಕು. ಇವಿಲ್ಲದಿದ್ದರೆ ಕ್ರಾಂತಿ ಸಂಭವಿಸುವುದಿಲ್ಲ. ಕ್ರಾಂತಿ ಸಂದರ್ಭದಲ್ಲಿ ದೇಶಕ್ಕೆ ದೇಶವೇ ಪಾಲುಗೊಳ್ಳುತ್ತದೆ. ಆಂದೋಲನ ಕಾಲದಲ್ಲಿ ರಕ್ತಪಾತ, ಇವುಗ ದೌರ್ಜನ್ಯಗಳು ಇಲ್ಲ. ಕ್ರಾಂತಿ ಸಂದರ್ಭದಲ್ಲಿ ಬಲಾತ್ಕಾರ, ರಕ್ತಪಾತ, ದೌರ್ಜನ್ಯ ಳೆಲ್ಲವೂ ಉಂಟು.

**ಕಾರಣಗಳು : ರಾಜಕೀಯ**

ಪ್ರತಿಯೊಂದು ದೇಶದ ಚರಿತ್ರೆಯು ಅಧಿಕಾರಕ್ಕಾಗಿ, ರಾಜ್ಯ ದಾಹಕ್ಕಾಗಿ ನಡೆದ ಯುದ್ಧಗಳಿಂದ ತುಂಬಿ ಹೋಗಿದೆ. ಕ್ರಾಂತಿ, ಆಂದೋಲನ, ಬಂಡಾಯ, ದಂಗೆಗಳು ಹೆಚ್ಚು ರಾಜಕೀಯ ಕಾರಣವಾಗಿಯೇ ಸಂಭವಿಸಿದವುಗಳಾಗಿವೆ. ಯಾಕೆಂದರೆ ರಾಜಕೀಯ ಕ್ಷೇತ್ರ ಆರ್ಥಿಕ ಹಿಡಿತ ಉಳ್ಳುದ್ದಾಗಿರುವುದರಿಂದ ಇಡೀ ದೇಶವನ್ನೇ ತನ್ನ ಅಧೀನದಲ್ಲಿ ಪಡೆದಿರುವುದರಿಂದ ಈ ಕಾರಣವಾಗಿ ಯುದ್ಧ ಸಂಘಟಿಸುವುದು ಸಹಜವೇ ಆಗಿದೆ. ಆಧಿಕಾರದಾಹಕ್ಕಾಗಿ ನಡೆದ ಯುದ್ಧಗಳೆಲ್ಲವೂ ಆಂದೋಲನದ ವ್ಯಾಪ್ತಿ ಪಡೆಯುವುದಿಲ್ಲವಾದರೂ ಆಂದೋಲನ ತರುವ ಸಾಧ್ಯತೆಗಳನ್ನು ಹೊಂದಿದೆ.

ಭಾರತಕ್ಕಿಂತ ಮೊದಲು ಪಾಶ್ಚಾತ್ಯದೇಶಗಳಲ್ಲಿ ಕೈಗಾರಿಕೆಗಳು ಬೆಳೆದದ್ದರಿಂದ ಆ ದೇಶದ ಚರಿತ್ರೆಯ ಗತಿ ತುಸು ಬದಲಾಯಿತು[12a]. ಕೈಗಾರಿಕೆಗಳು ಮುಖ್ಯವಾಗಿ ದೊಡ್ಡ ಪ್ರಮಾಣದಲ್ಲಿ ಬಂಡವಾಳ ಹಾಕುವವರನ್ನು ಅವಲಂಬಿಸಿವೆ. ಯುರೋಪ್ ದೇಶಗಳಲ್ಲಿ ಪಾಳೆಯಗಾರಿಕೆ ರಾಜರುಗಳಿಂದ ಬೇರ್ಪಟ್ಟು ಅಧಿಕಾರ ಬೂರ್ಶ್ವಾವರ್ಗದ ವಶವಾಯಿತು. ಬೂರ್ಶ್ವಾಗಳು ಕೈಗಾರಿಕೆ ಕಾರಣವಾಗಿ ಬಂಡವಾಳ ಹಾಕುವ ಶ್ರೀಮಂತರಾಗುತ್ತ ಹೋದರು. ಕ್ರಮೇಣ ಅಧಿಕಾರ ಬಂಡವಾಳಷಾಹಿಗಳ ಕೈವಶವಾಯಿತು. ಬಂಡವಾಳ ಷಾಹಿಗಳು ಕೈಗಾರಿಕೆ ಮತ್ತು ಉತ್ಪಾದನೆಗಳಿಗೆ ಕಾರ್ಮಿಕವರ್ಗವನ್ನು ಅವಲಂಬಿಸಬೇಕಾಯಿತು. ಕೈಗಾರಿಕೆಗಳು ಬೆಳೆಯುತ್ತ ಹೋದಂತೆಲ್ಲ ಶ್ರಮಿಕವರ್ಗವನ್ನು

12a. Karl Marx : Capital ನೋಡಿರಿ.

ಅವಲಂಬಿಸಬೇಕಾಯಿತು. ಕೈಗಾರಿಕೆಗಳು ಬೆಳೆಯುತ್ತಾ ಹೋದಂತೆಲ್ಲ ಶ್ರಮಿಕವರ್ಗ ಒಂದೆಡೆ ಸೇರುವ ಸಂದರ್ಭ ಒದಗಿಬಂತು. ಇವರ ದುಡಿಮೆಯನ್ನು ಅವಲಂಬಿಸಿದ ಬಂಡವಾಳಶಾಹಿಗಳು ಶ್ರಮಿಕವರ್ಗವನ್ನು ಶೋಷಿಸುತ್ತ ತಾವು ಶ್ರೀಮಂತರಾಗುತ್ತಾ ಹೋದರು. ಈ ಎಲ್ಲ ಕಿಳಿವಳಿಕೆಗಳು ಚರಿತ್ರೆಯ ಅಧ್ಯಯನದಿಂದಾಗಿ ಮಾರ್ಕ್ಸ್ ಕಂಡುಕೊಂಡದ್ದಾಗಿದೆ[12b].

18ನೇ ಶತಮಾನದಲ್ಲಿ ಫ್ರಾನ್ಸ್‌ನಲ್ಲಿ ಆದ ಕ್ರಾಂತಿ ವರ್ಗವರ್ಗಗಳ ನಡುವೆ ಅಧಿಕಾರಕ್ಕೆ ನಡೆದುದಾಗಿತ್ತು. ಅರಿಸ್ಟೊಕ್ರಾಟ್ಸ್ ಮತ್ತು ಬೂರ್ಶ್ವಾವರ್ಗಗಳು ಪರಸ್ಪರ ಅಧಿಕಾರದ ಸಲುವಾಗಿ ತಮ್ಮ ನೆತ್ತರನ್ನೇ ಕೋಡಿ ಹರಿಸಿದ್ದವು. ಬೂರ್ಶ್ವಾವರ್ಗದ ಕೈ ಮೇಲಾಗಿ ಅರಿಸ್ಟೊಕ್ರಾಟ್ಸ್ ವರ್ಗದ ಎಲ್ಲ ಆಸ್ತಿಪಾಸ್ತಿಗಳನ್ನು ಕಿತ್ತು ಕೊಂಡರು. ಫ್ಯೂಡಲ್ ವರ್ಗದ ಆಸ್ತಿ ಇಲ್ಲದಂತೆ ಮಾಡಿದರು. 18ನೇ ಶತಮಾನಕ್ಕಿಂತ ಹಿಂದೆ ಪ್ರಬಲ ಚಕ್ರವರ್ತಿ ಇನ್ನೊಬ್ಬ ಪ್ರಬಲ ಅಥವಾ ದುರ್ಬಲ ಚಕ್ರವರ್ತಿಯ ಮೇಲೆ ಯುದ್ಧ ಘೋಷಿಸಿ ಅಪಾರ ಸಂಪತ್ತನ್ನು ಕಿತ್ತು ಕೊಡಿದ್ದರು. ಇಲ್ಲೆಲ್ಲ ಬೂರ್ಶ್ವಾ ವರ್ಗದ ಸೋಗಲಾಡಿತನ ವ್ಯಕ್ತವಾಗಿರುವುದನ್ನು ಮಾರ್ಕ್ಸ್ ಸರಿಯಾಗಿಯೇ ಗಮನಿಸಿದ್ದಾನೆ. ಬೂರ್ಶ್ವಾ ವರ್ಗ ತಾವು ಅಧಿಕಾರಕ್ಕೆ ಬರುವ ಸಲುವಾಗಿ, ವೈಭವಯುತವಾಗಿ ಬದುಕುವ ಸಲುವಾಗಿ ನಡೆಸಿರುವ ಕುತಂತ್ರ, ಹೋರಾಟ ಮಾರ್ಕ್ಸ್‌ನಿಗೆ ಒಂದು ಹೊಸದಾರಿಯನ್ನು ತೋರಿಸಿತು. ಆದರಿಂದ ಪ್ರೇರಣೆ ಪಡೆದ ಮಾರ್ಕ್ಸ್ ವರ್ಗ ಸಮರವನ್ನು ಸಾರಿದ. ಬಂಡವಾಳಶಾಹಿ ಆಡಳಿತವನ್ನು ನಿರ್ನಾಮ ಮಾಡದ ಹೊರತು ಕಾರ್ಮಿಕರಿಗೆ ಸುಖ, ಶಾಂತಿಗಳು ಬರುವುದಿಲ್ಲವೆಂದೂ ಸಾರಿದ. ಅಲ್ಲದೆ ಇದು ಚರಿತ್ರೆಯ ಅನಿವಾರ್ಯ ಸ್ಫೋಟನೆಯಾಗಿ ಇವತ್ತಲ್ಲ ನಾಳೆ ಸಂಭವಿಸುತ್ತದೆಂದು ಸಾರಿದ.

ರಾಜಕೀಯವಾಗಿ ಉಂಟಾಗುವ ಆಂದೋಲನಗಳಲ್ಲಿ ಹೆಚ್ಚು ಅತೃಪ್ತಿ ನಾಯಕನದ್ದಾಗಿರುತ್ತದೆ. ಈ ನಾಯಕವರ್ಗ ತಮ್ಮ ಆಶೆಗಳನ್ನು ಪೂರ್ಣ ಮಾಡಿಕೊಳ್ಳುವ ಸಲುವಾಗಿ ಯುದ್ಧ ಘೋಷಿಸುತ್ತವೆ. ರಾಜಕೀಯ ಕಾರಣ

12b. Karl Marx: Communist Manifesto ನೋಡಿರಿ.

ವಾಗಿ ಬಂಡಾಯ ಅಥವಾ ಆಂದೋಲನ ಉಂಟಾದುದಕ್ಕೆ ಮಧ್ಯಕಾಲೀನದ ಪಶ್ಚಿಮ ಯೂರೋಪ್‌ನ ಯುದ್ಧ ಉತ್ತಮ ಉದಾಹರಣೆಯಾಗಿದೆ. ಮಧ್ಯ ಕಾಲೀನದಲ್ಲಿ ರೋಮನ್‌ದೊರೆಗಳು ತಾವೇ ಕ್ರಿಶ್ಚಿಯನ್ನರ ಸರ್ವಸ್ವತಂತ್ರ ಅಧಿ ಪತಿಗಳೆಂದು ಘೋಷಿಸಿಕೊಂಡರು. ಸಾಮಂತರಾಜರುಗಳ ಸ್ಥಾನ 'ಡ್ಯೂಕರು, ಶ್ರೀಮಂತರು, ರಾಜಕುಮಾರರಿಗಿಂತ ಕೆಳಗಿನದಾಗಿತ್ತು. ರೋಮನ್ ಚಕ್ರಾಧಿ ಪತ್ಯದಕಾಲದಲ್ಲಿ ಸಾಮಂತರಾಜರುಗಳ ಸಂಖ್ಯೆ ಹೆಚ್ಚಿತಷ್ಟೇ ಅಲ್ಲ ಅವರ ಅಧಿ ಕಾರ, ಹಣ ಎರಡೂ ಹೆಚ್ಚಿದವು. ಸಾಮಂತರಾಜರು ಬಲಗೊಂಡಂತೆಲ್ಲಾ ರೋಮನ್‌ಚಕ್ರಾಧಿಪತ್ಯದಿಂದ, ಚರ್ಚಿನ ಪಾದ್ರಿಗಳಿಂದ ಬೇರೆಯಾಗಿ ಸರ್ವ ಸ್ವತಂತ್ರರಾಜರುಗಳೆಂದು ಘೋಷಿಸಿಕೊಂಡರು. ಪಾದ್ರಿಗಳಿಗೂ ರೋಮನ್ ಚಕ್ರಾಧಿಪತ್ಯದ ನಡುವೆಯೂ ಇದ್ದ ಅಸಾಂಗತ್ಯಗಳು ಸಾಮಂತರಾಜರಿಗೆ ಮತ್ತಷ್ಟು ಪ್ರಯೋಜನಕಾರಿಯಾದವು. ಸಾಮಂತರಾಜರುಗಳು ತಮ್ಮ ಸಾರ್ವ ಭೌಮತ್ವವನ್ನು ಸ್ಥಾಪಿಸಿಕೊಂಡರು. ಅಧಿಕಾರ ಚಕ್ರಾಧಿಪತ್ಯದಡಿಯಲ್ಲಿ ಕೇಂದ್ರೀ ಕೃತವಾದುವುದನ್ನು ವಿರೋಧಿಸಿ ಇವರುಸ್ವತಂತ್ರರಾದರು. ಇಂತಹ ಬೆಳವಣಿ ಗೆಗಳು ಕರ್ನಾಟಕದ ಪ್ರತಿಯೊಂದು ರಾಜವಂಶದ ಮನೆತನದ ಚರಿತ್ರೆಯಲ್ಲಿ ಹುದುಗಿವೆ. ಪಲ್ಲವ, ಚೋಳ, ಬಾದಾಮಿ ಚಾಲುಕ್ಯ ವಂಶಗಳ ನಡುವೆ ಯುದ್ಧಗಳಾಗಲಿ ಕಲ್ಯಾಣದ ಚಾಲುಕ್ಯರು, ಕಳಚೂರ್ಯರು, ಹೊಯ್ಸಳರನಡುವೆ ನಡೆದಯುದ್ಧಗಳಾಗಲಿ ಪ್ರೌಢದೇವರಾಯ, ಕೃಷ್ಣದೇವರಾಯರ ಕಾಲದ ಯುದ್ಧ ಗಳಾಗಲಿ ಇಂತಹವೇ ಆಗಿವೆ. ಇಲ್ಲೆಲ್ಲ ಅಧಿಕಾರ, ಸಂಪತ್ತುಗಳ ಸಲುವಾಗಿ ರಾಜಕೀಯ ಯುದ್ಧಗಳು ನಡೆದಿವೆ. ಆದರೆ ಇವುಗಳೆಲ್ಲ ಅಧಿಕಾರದ ವ್ಯಾಪ್ತಿ ಯನ್ನು ಹೆಚ್ಚಿಸಿದವುಗಳಾಗಿದ್ದುವೇ ವಿನಾ ಅಧಿಕಾರದ ರೀತಿಯನ್ನು ಬದಲಾಯಿ ಸಿದವುಗಳಾಗಿರಲಿಲ್ಲ. ಹೀಗಾಗಿ ಇವು ರಾಜಕೀಯ ಆಂದೋಲನಗಳಾಗದೆ ರಾಜ ಕೀಯ ಯುದ್ಧಗಳಾಗಿವೆ.

ಅಮೇರಿಕದ ರೈತರ ಯುದ್ಧವಾಗಲಿ ಫ್ರಾನ್ಸ್, ರಷಿಯದ 1917ರ ಯುದ್ಧಗಳಾಗಲಿ ಕೇವಲ ಅಧಿಕಾರಕ್ಕೆ ಮಾತ್ರ ಸೀಮಿತವಾಗಿದೆ. ಅದರಾಚೆಗೂ ನಡೆದ ಆಂದೋಲನ ಮತ್ತು ಕ್ರಾಂತಿಗಳಾಗಿವೆ. 1915 ರಲ್ಲಿ ರಷಿಯಾದ ಕಾರ್ಮಿಕರಿಗೆ ಝಾರ್‌ನನ್ನು ಕೊಂದುಹಾಕುವುದಷ್ಟೇ ಉದ್ದೇಶವಾಗಿರಲಿಲ್ಲ. ಝಾರ್ ಷಾಹಿ ಆಡಳಿತವನ್ನು ನಿರ್ಮೂಲನಗೊಳಿಸುವುದೂ ಆಗಿದ್ದಿತು. ಅಲ್ಲದೆ

ಕಾರ್ಮಿಕರ ಸುಖಕ್ಕಾಗಿ ಹೊಸ ವ್ಯವಸ್ಥೆಯನ್ನು ಸ್ಥಾಪಿಸುವುದೂ ಆಗಿದ್ದಿತು. ಅಂತೆಯೇ ನಡೆದ ಈ ದಾಖಲೆ ಪ್ರಪಂಚದ ಕಾರ್ಮಿಕರಿಗೆ ಅರುಣೋದಯವಾದಂತಾಗಿದೆ. ಆದರೆ ಈ ವಿಜಯ ಕುಳಿತು ಕನಸು ಕಾಣುವಷ್ಟು ರೋಮಾಂಚಕಾರಿಯಾದುದಲ್ಲ. ದೇಹದ ರಕ್ತದ ಕಣಕಣವನ್ನು ಬಸಿಯುವಷ್ಟು ಹೃದಯ ವಿದ್ರಾವಕವಾದ ಸಂಗತಿಯದಾಗಿದೆ.

ಚರಿತ್ರೆಯ ಉದ್ದಕ್ಕೂ ತುಂಬಿರುವ ಯುದ್ಧ, ರಕ್ತಪಾತಗಳು ಗೆಲುವು ಸುಲಭವಾಗಿ ದಕ್ಕುವುದಲ್ಲ ಎಂಬುದನ್ನು ಸಾರಿ ಹೇಳುತ್ತವೆ. ಗೆಲುವಿಗಾಗಿ ಅನೇಕ ಸಾವಿರ ತಲೆಗಳೇ ಉರುಳಬೇಕಾಗುತ್ತದೆ. ರಕ್ತಸಿಕ್ತವಾದ ದೇಹಗಳು ರಕ್ತದೋಕುಳಿಯಲ್ಲಿ ಕೊಚ್ಚಿ ಹೋಗಬೇಕಾಗುತ್ತದೆ. ಮಾರ್ಕ್ಸ್‌ನ ಈ ಅಧ್ಯಯನವನ್ನು ಉಪಯೋಗಿಸಿಕೊಂಡ ಲೆನಿನ್ ರಷಿಯದ ಕ್ರಾಂತಿ ಸಮಯದಲ್ಲಿ ತನ್ನ ಜನತೆಯನ್ನು ಹುರಿದುಂಬಿಸಿದ. ನಾವು ಗುಲಾಮರಾಗಿ ಹುಟ್ಟಿದುದಕ್ಕೆ ಯಾರನ್ನು ದೂಷಿಸಬೇಕಾಗಿಲ್ಲ.[13] ಆದರೆ ಸ್ವಾತಂತ್ರ್ಯಕ್ಕಾಗಿ ಹೋರಾಟ ಮಾಡುವುದನ್ನು ಬಿಟ್ಟು ಗುಲಾಮಗಿರಿಯನ್ನು ಒಪ್ಪಿಕೊಳ್ಳುವ ಅಯೋಗ್ಯನನ್ನು ಕಂಡರೆ ನನ್ನ ರಕ್ತ ಕುದಿಯುತ್ತದೆ ಎನ್ನುತ್ತಾನೆ. ಝಾರ್ ನಿಕೋಲಸನ ಆಳ್ವಿಕೆಯಾಗಲಿ, ಅಮೇರಿಕದ ವಿಲ್ಸನ್ನನ ಆಳ್ವಿಕೆಯಾಗಲಿ ಯಾವ ಶ್ರಮಿಕವರ್ಗವನ್ನು ಅಧ್ಯಯನಮಾಡಲು ಬಿಡಲಿಲ್ಲ.[14] ಆಗ ವಿದ್ಯಾಭ್ಯಾಸದ ಅವಕಾಶ ಶ್ರಮಿಕ ವರ್ಗಕ್ಕೆ ದೊರೆಯಲಿಲ್ಲ. ಇವರ ಕಾಲದಲ್ಲಿ ವಿಜ್ಞಾನ, ಶಿಕ್ಷಣಗಳು ಕೂಡ ಶ್ರಮಿಕರ ಶೋಷಣೆಗೆ ಬಳಕೆಯಾದವು. ಸೌಲಭ್ಯಗಳು ಶ್ರೀಮಂತರಿಗೆ ಮಾತ್ರ ದಕ್ಕುತ್ತಿದ್ದವು, ಶ್ರಮಿಕವರ್ಗವನ್ನು ದಾಸ್ಯದಲ್ಲಿಯೇ ಇರುವಂತೆ ಮಾಡಲು ಅವು ಯಶಸ್ವಿಯಾದವು. ಕ್ಷುದ್ರ ನಂಬಿಕೆಗಳನ್ನು ಹೇರಿ ಶ್ರಮಿಕರು ಹೊಟ್ಟೆ ತುಂಬಿಸಿಕೊಳ್ಳುವುದರತ್ತ ಒಲಿಯುವಂತೆ ಮಾಡಿದರು.

ಇಲ್ಲಿ ಗಮನಿಸ ಬೇಕಾದ ಅಂಶಗಳಿವೆ. ಚರಿತ್ರೆ ತನ್ನಗತಿಯಲ್ಲಿ ಹೊಸ ಹೊಸ ವ್ಯವಸ್ಥೆಗೆ ದಾರಿಮಾಡುತ್ತಾ ಮುಂದುವರಿಯುತ್ತಿರುತ್ತದೆ. ಈ ಸಂದರ್ಭದಲ್ಲಿ ಹಳೆಯವ್ಯವಸ್ಥೆಯನ್ನು ಉರುಳಿಸಿ ಸ್ಥಾಪಿತವಾದ ಹೊಸವ್ಯವಸ್ಥೆ ಕೆಲವು ಕಾಲ ಎಲ್ಲ ಅನುಭೋಗವನ್ನು ಪಡೆಯುತ್ತ ಶ್ರೀಮಂತಿಕೆಯಸೋಗನ್ನು ತೇಗು

13. Lenin Collected Works, Vol. 21, P 102-106.
14. ಅದೇ, Vol. 29, P. 69.

ತ್ತದೆ. ಆದರೆ ಚರಿತ್ರೆ ಇದರೊಂದಿಗೆಯೇ ಬೆಳವಣಿಗೆಯ ಹೆಜ್ಜೆ ಇಡುತ್ತಿರುತ್ತದೆ. ಒಂದುವರ್ಗವನ್ನು ಸುಖದಲ್ಲಿ ಬೀಳಿಸುವುದರ ಮುಖಾಂತರವೇ ಅದರ ತುರೀಯ ಘಟ್ಟದಲ್ಲಿ ಆ ವ್ಯವಸ್ಥೆಯೇ ಅದಕ್ಕೆ ಮುಖ್ಯವಾಗಿ ಮತ್ತೊಂದು ವ್ಯವಸ್ಥೆಗೆ ದಾರಿಮಾಡಿಕೊಡುತ್ತದೆ. ಬಂಡವಾಳಷಾಹಿ ವ್ಯವಸ್ಥೆ ಬಂದದ್ದಾದರೂ ಹಾಗೆಯೇ. ಈ ಸಂದರ್ಭದಲ್ಲಿ ಶ್ರೀಮಂತರ ವಿಲಾಸ, ವೈಭೋಗ, ಸುಖಲೋಲುಪತೆ ಒಂದೇ ಎರಡೇ. ಆದರೆ ಅದೇ ಅದಕ್ಕೆ ಮೃತ್ಯುವಾಯಿತು. ಅದು ತತ್ಕಾಲದ ಸಡಗರ. ನಂತರ ಶ್ರಮಿಕವರ್ಗದ ವಿಜಯ ಬಹುಬೇಗನೆ ಬಂತು. ಇದರ ಕಾಲವಾದರೂ ಇನ್ನೂ 100 ವರ್ಷಗಳಿದ್ದರೆ ಹೆಚ್ಚು. ಯಾಕೆಂದರೆ ತನ್ನೊಳಗಿನ ಬಿಗಿ ಆಡಳಿತ ನೀತಿಯಿಂದಾಗಿ ಅತೃಪ್ತಗೊಂಡ ಜನತೆಯ ಸಂಖ್ಯೆಯನ್ನು ಹೆಚ್ಚಿಸುತ್ತಿರುತ್ತದೆ. ಈ ಅತೃಪ್ತ ಜನತೆಗೆ ಶಿಕ್ಷೆ ವಿಧಿಸುತ್ತ ; ರಾಷ್ಟ್ರದ್ರೋಹದ ಆಪಾದನೆ ಮಾಡುತ್ತ ಮುಂದುವರಿಯುವುದು ಹೆಚ್ಚಿದಂತೆಲ್ಲ ಅದು ವಿಕೋಪಕ್ಕೆ ಹೋಗುತ್ತದೆ. ಆಗ ಅದೇ ವ್ಯವಸ್ಥೆ ಮತ್ತೊಂದು ವ್ಯವಸ್ಥೆಯಿಂದ ತುಳಿಸಿಕೊಂಡು ಹಿಂದೆ ಹೋಗುವುದು ಅನಿವಾರ್ಯಆಗುತ್ತದೆ. [15]

ರಾಜಕೀಯ ಕಾರಣವಾಗಿ ಉಂಟಾಗುವ ಆಂದೋಲನ ಎರಡು ಪರಿಸ್ಥಿತಿಯನ್ನುಅವಲಂಬಿಸಿರುತ್ತದೆ. 1. ದೇಶದ ಮಧ್ಯಮವರ್ಗದ ಜನತೆ ಶಕ್ತರಾಗುತ

15. ರಷಿಯ ತನ್ನ ಕಮ್ಯೂನಿಸ್ಟ್ ಆಡಳಿತ ವ್ಯವಸ್ಥೆಯಿಂದಾಗಿ ಅನೇಕರಿಗೆ ರಾಷದ್ರೋಹದ ಆಪಾದನೆ ಹೇರುತ್ತಿದೆ. ಮನುಷ್ಯನ ವ್ಯಕ್ತಿಸ್ವಾತಂತ್ರ್ಯ, ಆಲೋಚನೆಗಳನ್ನು ದಮನಗೊಳಿಸುತ್ತಿದೆ. ಅಲೆಕ್ಸಾಂಡರ್ ಜಿನ್ಸ್‌ಬರ್ಗ್, ಅನಟೋಲಿ ಸ್ಕಾಕ್ರಾನ್‌ಸ್ಕಿ, ವಿಕ್ಟೋರಿಯಾ ಪೈಥಸ್ ಮುಂತಾದ ಸಾಹಿತಿಗಳಿಗೆ ವಿಧಿಸಿರುವ ಶಿಕ್ಷೆ ಅಮಾನುಷವಾದುದು. ಯೆಹೂದಿ ಜನಾಂಗದವರೆಂದು ದ್ವೇಷಿಸುವುದು, ನೋಬೆಲ್ ಪ್ರಶಸ್ತಿ ವಿಜೇತರಾದ ಆಂಡ್ರೆ ಸುಖರೋವ್, ಅಲೆಕ್ಸಾಂಡರ್ ಸೋಲ್ಜೆನಿಟ್ಸನ್, ಬೋರಿಸ್ ಪಾಸ್ಟರ್ ನಾಕ್ ಇತ್ಯಾದಿಗಳವರಿಗೆ ರಷಿಯಂದ ಆಡಳಿತ ನೀತಿ ಪ್ರಶ್ನಿಸಿದ್ದಕ್ಕೆ ಕೊಟ್ಟಿರುವ ಶಿಕ್ಷೆ ಜ್ಞಾನದ ಎತ್ತರಕ್ಕೆ ನೀಡಿದ ಗುಂಡಿನೇಟಾಗಿದೆ. ಡಾಕ್ಟರ್ ಜಿವಾಗೊಗೆ ಕೊಟ್ಟ ಶಿಕ್ಷೆಯ ಕತೆ ಒಂದು ದೊಡ್ಡ ಕಾದಂಬರಿಯೇ ಆದೀತು. ಕಮ್ಯುನಿಸ್ಟ್ ವ್ಯವಸ್ಥೆಯ ಆರಾಧಕರಲ್ಲದವರಿಗೆ ಉಳಿಗಾಲವಿಲ್ಲ ಎನ್ನುವ ದರಿದ್ರ ಆಡಳಿತ ನೀತಿ ಒಂದು ಕಾಲಕ್ಕೆ ಅವಸಾನ ಕಾಣಬೇಕಾಗುತ್ತದೆ. ಈ ಅವಸಾನಕ್ಕಾಗಿ ಅದು ಹೀಗೆ ಹುಚ್ಚುಚ್ಚಾರೆ ವರ್ತಿಸುತ್ತ ಒಂದೊಂದೇ ಹೆಜ್ಜೆ, ಒಂದೊಂದೇ ಹೆಜ್ಜೆ ಇಡುತ್ತ ಮುಂದುವರಿದಿದೆ.

ಬಂದು ಅಧಿಕಾರ ನಡೆಸುವವರ ಶಕ್ತಿಯನ್ನು ಕಡಿಮೆಗೊಳಿಸುತ್ತಾ ಹೋಗಿ ಅದರ ಪ್ರಭುತ್ವವನ್ನು ಕಿತ್ತೊಗೆಯುತ್ತದೆ. ಇದು ನಿಧಾನಗತಿಯಿಂದ ಕೂಡಿದ್ದು. ಅಲ್ಲದೆ ಈ ನಿಧಾನಗತಿಯಲ್ಲಿ ಕೂಡ ಎರಡು ದಾರಿಗಳಿವೆ. ಒಂದು. ಗಾಂಧಿಯಂತೆ ಅಸಹಕಾರಮಾರ್ಗ ಹಿಡಿಯುವುದು ಒಂದು ದಾರಿಯಾದರೆ ಲೆನಿನ್‌ನಂತೆ ಒಮ್ಮೆಲೆ ಭಾಗವಹಿಸಿ ಘೋರ ಯುದ್ಧ ಸಾರುವುದು ಇನ್ನೊಂದು ದಾರಿಯಾಗಿದೆ. ೭. ಇನ್ನು ಎರಡನೆಯದೆಂದರೆ ಇಡೀ ದೇಶದಲ್ಲಿ ಬಡಜನತೆಗೆ ಇನ್ನು ಬದುಕುವುದು ಸಾಧ್ಯವಿಲ್ಲದಾಗ, ಉಸಿರು ಕಟ್ಟಿಸುವ ವಾತಾವರಣ ಏರ್ಪಟ್ಟಾಗ ಮೊದಲೇ ನೊಂದು ಬೆಂದ ಜನತೆ ಸೇಡಿನ ಮಾರ್ಗದತ್ತ ಒಲಿಯುತ್ತದೆ. ರೋಷ ತಾಂಡವವಾಡುತ್ತದೆ. ಇನ್ನು ತಾನು ಬದುಕುತ್ತ ದಿನೇ ದಿನೇ ಇಷ್ಟಿಷ್ಟು ಸಾಯುವುದರ ಬದಲು ತನ್ನ ಸೇಡನ್ನಾದರೂ ತೀರಿಸಿಕೊಂಡು ಸಾಯುವುದು ಸರಿಯೆಂದು ಒಮ್ಮೆಲೇ ರೊಚ್ಚಿಗೇಳುತ್ತದೆ. ಇಂತಹ ವಾತಾವರಣ ಕೂಡ ಲೆನಿನ್ ಕಾಲದಲ್ಲಿ ಉಂಟಾಗಿದ್ದಿತು. ಆ ಕ್ರಾಂತಿಸಂದರ್ಭದಲ್ಲಿ ಮಧ್ಯಮ ವರ್ಗದ ಜನತೆಗಿಂತ ಈ ಬಡಜನತೆಯ ಸಂಖ್ಯೆಯು ಅನೇಕ ಪಟ್ಟು ಹೆಚ್ಚಿನದಾಗಿತ್ತು. ಲೆನಿನ್ ಅದರ ಅವಕಾಶವನ್ನು ಸದುಪಯೋಗಪಡಿಸಿಕೊಂಡ. ಆ ಬಡಜನತೆಯ ಯುದ್ಧ ಪ್ರತೀಕಾರದ್ದು ಮಾತ್ರ ಆಗಿರುತ್ತದೆ. ಅಂತಹ ಸಂದರ್ಭವನ್ನು ಬಳಸಿಕೊಂಡ ಶ್ರೇಷ್ಠ ನಾಯಕರುಗಳು ಅದರ ಗತಿಯನ್ನು ವ್ಯವಸ್ಥಿತಗೊಳಿಸುತ್ತ ಗುರಿಯನ್ನು ಸ್ಪಷ್ಟವಾಗಿ ತಿಳಿಸಿಕೊಡುತ್ತಾರೆ. ಕೇವಲ ಪ್ರತೀಕಾರದಲ್ಲಿ ಪರ್ಯವಸಾನವಾಗುವ ಯುದ್ಧಗಳಿಗೆ ಕ್ರಾಂತಿಯಸ್ವರೂಪ ಕೊಡುತ್ತಾರೆ ಇಂತಹ ನಾಯಕರುಗಳು ಎಂದೆಂದೂ ಈ ಶೋಷಣೆಗೆ ಒಳಗಾಗುವುದನ್ನು ತಪ್ಪಿಸಬೇಕಾದರೆ ಮಾಡಬೇಕಾದದ್ದು ಏನು ? ಮತ್ತು ಹೇಗೆ ? ಎಂಬುದನ್ನು ತೋರಿಸುತ್ತಾರೆ. ತಮ್ಮ ಪಾಡಿಗೆ ತಾವು ಮೇದುಕೊಂಡಿರುವ ಜಿಂಕೆಗಳನ್ನು ತನ್ನ ಹಸಿವಿನ ಸಲುವಾಗಿ ಕೊಂದುತಿನ್ನುವ ಹುಲಿಗೆ ಪ್ರತೀಕಾರ ಮಾತ್ರವೇ ಅಲ್ಲದೆ ಮುಂದೆಯೂ ಅದರಿಂದ ಪಾರಾಗಲು ಅದರ ಆ ದೌರ್ಜನ್ಯವನ್ನೇ ತಪ್ಪಿಸಲು ದಾರಿತೋರಿಸುತ್ತಾರೆ. ಈ ದಿಸೆಯಲ್ಲಿ ಮಾರ್ಗಗಳು ಎರಡು. ಬಂಡವಾಳಶಾಹಿ ಹುಲಿಗಳನ್ನು ಕೊಲ್ಲುವುದು ಇಲ್ಲ ಅದರ ಹಸಿವೆಯನ್ನು ಕಡಿಮೆ ಮಾಡುವುದು ಮತ್ತು ಬೇರೊಂದನ್ನು ಕೊಂದು ಹೊಟ್ಟೆ ತುಂಬಿಕೊಳ್ಳುವುದರ ಬದಲು ಬೇರೆ ರೀತಿಯಲ್ಲಿ ತನ್ನ ಶ್ರಮದಿಂದ ತಾನು ಹೊಟ್ಟೆ ತುಂಬಿಸಿಕೊಳ್ಳುವುದೇ ಆಗಿದೆ.

**ಧಾರ್ಮಿಕ ಕಾರಣಗಳು**

ಧರ್ಮ ಕಾರಣವಾಗಿ ಉಂಟಾದ ಆಂದೋಲನಗಳು ಪ್ರತಿಯೊಂದು ಧರ್ಮದ ಚರಿತ್ರೆಯಲ್ಲೂ ಇವೆ. ಇಂಥದಕ್ಕೆ ಸೊಗಸಾದ ಉದಾಹರಣೆಯಾಗಿ ಪ್ರಾಟೆಸ್ಟೆಂಟ್ ಪಂಥದ ಪೂರ್ವ ಚಟುವಟಿಕೆಯನ್ನು ಹೆಸರಿಸಬಹುದಾಗಿದೆ. ಈ ಚಳುವಳಿ ಧಾರ್ಮಿಕವಾದದ್ದಾದರೂ ರಾಜಕೀಯ ಪರಿವಲಯದಿಂದ ಬೆಂಬಲ ಪಡೆದು ಆಂದೋಲನವಾಗಿ ಪ್ರಾಟೆಸ್ಟೆಂಟ್ ಪಂಥಕ್ಕೆ ಕಾರಣವಾಯಿತು. ಪ್ರಾಚೀನ ರೋಮನ್ ಚಕ್ರವರ್ತಿಗಳ ಮಧ್ಯಕಾಲೀನದಲ್ಲಿ ಯೂರೋಪ್ ದೇಶದ ಜನತೆಯನ್ನು ಕ್ರಿಸ್ತಧರ್ಮಕ್ಕೆ ಮತಾಂತರಗೊಳಿಸುವ ಕಾರ್ಯ ನಡೆಯಿತು. ಈ ಬೆಳವಣಿಗೆ ಬೆಳೆದಂತೆಲ್ಲ ಚರ್ಚಿಗೆ ಮತ್ತು ಪಾದ್ರಿಗೆ ಪ್ರಾತಿನಿಧ್ಯದೊರೆಯಿತು. ರಾಜರುಗಳು ಕೂಡ ಚರ್ಚಿನ ಅಧೀನದಲ್ಲಿ ಬಂದರು. 13ನೇ ಶತಮಾನದ ಆರಂಭದಲ್ಲಿ ವ್ಯವಹಾರ ಅರಿಯದ ಮೂರನೆ ಪೋಪನು ಅದುವರೆಗೆ ಇರದಂತಹ ಸಾರಸಂಗ್ರಹವಾದ ಉದಾರ ನೀತಿಯನ್ನು ಧಾರ್ಮಿಕ ಮತ್ತು ರಾಜಕೀಯ ವಲಯಗಳಲ್ಲಿ ನೆಲೆಗೊಳಿಸಿದ. ಆದರೆ 100 ವರ್ಷದ ನಂತರ 14ನೇ ಶತಮಾನದ ಹಾದಿಯಲ್ಲಿ ಫ್ರಾನ್ಸಿನ ದೊರೆ ನಾಲ್ಕನೇ ಫಿಲಿಪ್ ಎಂಟನೆ ಪೋಪನನ್ನು ಬಂಧಿಸುವುದರ ಮೂಲಕ ತೇಜೋವಧೆಮಾಡಿದ. ಪ್ರಾಟೆಸ್ಟೆಂಟ್ ಪಂಥದ ಉಗಮದ ಪೂರ್ವದಲ್ಲಿ ಚರ್ಚು ಮತ್ತು ರಾಜರುಗಳ ನಡುವೆ ತೀವ್ರ ಸಂಘರ್ಷ ಏರ್ಪಟ್ಟಿತು. ಚರ್ಚಿನ ಅಧಿಕಾರಿಗಳು ಅನವಶ್ಯಕವಾಗಿ ರಾಜಕೀಯ ಹಿಡಿತ ಹೊಂದಿರುವುದನ್ನು ಸ್ವತಂತ್ರಾಪೇಕ್ಷಿಗಳಾದ ರಾಜರು ಪ್ರತಿಭಟಿಸಿದರು. ಇತ್ತ ಪಾದ್ರಿಗಳು ಭವ್ಯವಾದ ಬಂಗಲೆ, ಅರಮನೆಗಳ ನಿರ್ಮಾಣ ಮಾಡಿಸಿ ಅವುಗಳಲ್ಲಿ ವಿಲಾಸ ಜೀವನದಲ್ಲಿ ವ್ಯಾಪಿಸತೊಡಗಿದರು. ಪೋಪನ ಬಗೆಗೆ ಪ್ರಜೆಗಳು ಮತ್ತು ರಾಜರಿಂದ ಅಸಮಾಧಾನಗಳು ವ್ಯಕ್ತವಾಗತೊಡಗಿದವು. ಬೇಕೆಂದು ಪಥ ಉಗಮವಾಗುವುದಕ್ಕೆ ಶಕ್ಯ ಸಂದರ್ಭ ಒದಗಿ ಬಂತು. ಪರಿಶುದ್ಧ ಜೀವನ, ಸರಳ ಜೀವನವಿಧಾನ, ಕ್ರಿಸ್ತನ ತತ್ವಗಳ ಆಚರಣೆಯತ್ತ ಒಲಿಯುವ, ಬೈಬಲ್ಲಿನಲ್ಲಿ ಅತೀವ ಶ್ರದ್ಧೆ ಇರುವ ಜನತೆ ಒಂದು ಕಡೆ ಸೇರುತ್ತಾ ಹೋದರು. ಲೂಥರನ ಮೂಲಕ ಇದು ಹೊರದಾರಿ ಕಂಡುಕೊಂಡಿತು.

ಚರ್ಚು ಪೋಪನ ಅಂಕೆಯಲ್ಲಿಲ್ಲದೆ ಚರ್ಚಿನ ಕೌನ್ಸಿಲ್ಲಿನಿಂದ ನಿಯಂತ್ರಿತವಾಗಬೇಕೆಂದು ಕೆಲವು ಕ್ಯಾಥೊಲಿಕ್ ಪಂಥದ ನಾಯಕರು ಪ್ರತಿಪಾದಿಸಿದರು. ಈ ಕೌನ್ಸಿಲ್‌ಗಳು ಚರ್ಚಿನ ಸದಸ್ಯ ಮತ್ತು ನಾಯಕನಲ್ಲಿ ಪ್ರಗತಿ ತರುವ ಸಲುವಾಗಿ ಈ ಮುಂಚೆ ಹಲವು ಕಡೆ ಸೇರಿದ್ದವು. 1419ರಲ್ಲಿ ಪೀಸಾ ಮತ್ತು ಇಟಲಿಯಲ್ಲೂ, 1414 ರಿಂದ 1418ರವರೆಗೆ ಜರ್ಮನಿಯಲ್ಲೂ, 1431 ರಿಂದ 1449ರವರೆಗೆ ಬ್ರಸೆಲ್ ಮತ್ತು ಸ್ವಿಟ್ಸರ ಲೆಂಡ್ ದೇಶಗಳಲ್ಲಿ ಸಮಾವೇಶ ಗೊಂಡಿದ್ದವು. ಪೋಪ್ ಮತ್ತು ಕೌನ್ಸಿಲ್‌ಗಳ ನಡುವೆ ಅಧಿಕಾರ ಮತ್ತು ರಾಜಕೀಯ ಹಿಡಿತಕ್ಕಾಗಿ ಹೋರಾಟ ನಡೆದೇ ಇತ್ತು. ಇವೆಲ್ಲವು ಲೂಥರನಿಗೆ ಸೊಗಸಾದ ಭೂಮಿಕೆ ಒದಗಿಸಿದವು. ಈತ ಪೋಪ್‌ಗಳ ಚಾರಿತ್ರ್ಯಕ್ಕನುಗುಣವಾಗಿ ಯಾವ ಅಧಿಕಾರವೂ ಬೇಕಿಲ್ಲವೆಂತಲೂ ಸರಳ ಮತ್ತು ಪರಿಶುದ್ಧ ಜೀವನದಿಂದ ದಯಾಮಯನಾದ ಏಸುವನ್ನು ಒಲಿಸಿಕೊಳ್ಳಬಹುದೆಂತಲ್ಲೂ ಅದೇ ದಾರಿಯಲ್ಲಿ ಮಾತ್ರ ನಡೆಯ ಬೇಕೆಂತಲೂ ಪ್ರಸ್ತಾಪಮಾಡಿದ. ಈತನ ಈ ಆಲೋಚನಾ ದಾರಿಗಳು ರಾಜಕೀಯ ಪ್ರಮುಖರಿಗೆ ಮಾತ್ರವಲ್ಲ ಪ್ರಜೆಗಳಿಗೂ ಬಲವಾಗಿ ಹಿಡಿಸಿದವು. ಕ್ರುದ್ಧರಾದವರೆಂದರೆ ಅಧಿಕಾರದಾಹಿಗಳಾದ ಪೋಪರೂ ಮತ್ತು ಅವರ ವಕೀಲಿ ವಹಿಸುವ ರಾಜರುಗಳು. ಈ ಸಂಘರ್ಷ ಪ್ರಾಟೆಸ್ಟೆಂಟ್ ಪಂಥದ ಆಂದೋಲನಕ್ಕೆ ನಾಂದಿಯಾಯಿತು, ಯಶಸ್ವಿಯಾಯಿತು[16].

ಈ ಮುಂಚೆ ಪೋಪ್‌ಗಳ ಹುಚ್ಚು ದರ್ಬಾರನ್ನು ಅನೇಕ ಕಡೆ ಪ್ರತಿಭಟಿಸಿದರು. ಪೋಪ್‌ಗಳು ಧಾರ್ಮಿಕವಲಯ ಒಂದನ್ನು ಬಿಟ್ಟು ಉಳಿದೆಲ್ಲದರಲ್ಲೂ ತಲೆಹಾಕುವ ಔಚಿತ್ಯವನ್ನು ಪ್ರಶ್ನಿಸಿದರು. ಪೋಪ್‌ಗಳು ಚರ್ಚಿನ ಪಾವಿತ್ರ್ಯತೆಯನ್ನು ಕಾಪಾಡಿಕೊಳ್ಳಬೇಕೆಂತಲೂ, ಧರ್ಮ ಸಹಿತವಾದ ಬದುಕು ಬದುಕ ಬೇಕೆಂತಲೂ ಅನೇಕ ಧಾರ್ಮಿಕ ನಾಯಕರುಗಳು ಅಭಿಪ್ರಾಯ ವ್ಯಕ್ತಪಡಿಸಿದರು. ಇವರ ಹಿತವಚನಗಳನ್ನು ಪಾದ್ರಿಗಳು ಕಿವಿಗೆ ಹಾಕಿಕೊಳ್ಳಲೇ ಇಲ್ಲ. ಇಂಗ್ಲೆಂಡಿನಲ್ಲಿ ಜಾನ್ ವೈಕ್ಲಿಫ್, ಬೊಹೆಮಿಯದಲ್ಲಿ ಜಾನ್‌ಹುಸ್, ಇಟಾಲಿಯಲ್ಲಿ ನಿರೊಲಾಮೊ, ಸಾವೊನರೋಲ ಇವರುಗಳು ಮುಖ್ಯವಾಗಿ

16. The World Book Encyclopaedia, Vol. 16, P 186.

ಪಾದ್ರಿಗಳ ಅನೈತಿಕ, ಅಧಾರ್ಮಿಕ ನಡವಳಿಕೆಯನ್ನು ಟೀಕಿಸಿದರು. ಇವರ ವಿರೋಧ ಫಲಕಾರಿಯಾಗಲಿಲ್ಲ. ಕ್ರೈಸ್ತಧರ್ಮದ ಆಗು ಹೋಗುಗಳ ಬಗ್ಗೆ ಚಿಂತಿಸುವವರಾಗಿದ್ದ ಜೋಹಾನ್ಸ್ ಎಕ್‌ಹಾರ್ಟ್ ಮತ್ತು ಥಾಮಸ್ ಎಕೆಂಪಿಸ್ ಇವರುಗಳು ಹೇಳಿದರೂ ಪ್ರಯೋಜನ ಆಗಲಿಲ್ಲ. ಯಾರೊಬ್ಬರೂ ಚರ್ಚಿನ, ಕ್ರೈಸ್ತಧರ್ಮದ ಪಾವಿತ್ರತೆಯನ್ನು ಉಳಿಸಿಕೊಳ್ಳಲಿಲ್ಲ. ಧರ್ಮ ಅನುಯಾಯಿಗಳಿಲ್ಲದೆ ಕಲುಷಿತ ಸ್ವರೂಪ ಪಡೆದ ಕಾಲದಲ್ಲಿ ಮಾರ್ಟಿನ್ ಲೂಥರ್ ಧರ್ಮದ ಪರಿವಲಯಕ್ಕೆ ನಡೆದು ಬಂದ. ಕೊಚ್ಚಿ ಹೋಗುವ ದೋಣಿಯನ್ನು ಉಳಿಸಿ ಅದರಲ್ಲಿ ತಾನೂ ಆಶ್ರಯಪಡೆದ.

ಧಾರ್ಮಿಕ ಆಂದೋಲನ ಮುಖ್ಯವಾಗಿ ಪ್ರಭಾವ ಬೀರುವುದು ಸಂಸ್ಕೃತಿಯ ಮೇಲೆ. ತನ್ನ ಧಾರ್ಮಿಕವಾದ ಆಚರಣೆಗಳ ಮೂಲಕ, ನಡೆ, ನುಡಿ, ಉಡಿಗೆ, ಪೂಜಾವಿಧಿಯ ಮೂಲಕ ಇದು ಪ್ರಸಾರವಾಗುತ್ತ ಹೋಗುತ್ತದೆ. ಧಾರ್ಮಿಕ ಆಂದೋಲನ ಕ್ರಾಂತಿಯಂತೆ ಎದ್ದು ಕಾಣುವುದಿಲ್ಲ. ಅದು ಆಳ ವಾಗಿರುವ ಹೊಳೆ ಮೇಲುನೋಟಕ್ಕೆ ನಿಧಾನಗತಿಯಲ್ಲಿ ಸಾಗುವಂತೆ ಧರ್ಮದ ಆಂದೋಲನ ನಡೆಯುತ್ತದೆ. ಸುಳಿ, ಮತ್ತು ಸೆಳವು ಇರುವ ಸ್ಥಳದ ಹೊಳೆ ಮೇಲು ನೋಟಕ್ಕೆ ಯಾವ ಶಬ್ದವನ್ನು ಮಾಡುವುದಿಲ್ಲ. ಅದರ ಗತಿಯೂ ನಿಧಾನವಾಗಿ ಕಂಡು ಬರುತ್ತದೆ. ಆದರೆ ಅಲ್ಲೊಂದು ಎಲೆ ಕಡ್ಡಿ ಹಾಕಿ ನೋಡಿದರೆ ನಿಜವಾಗಿಯೂ ಅದರ ಗತಿ ವೇಗ ಎಂತಹದು ಎಂಬುದು ತಿಳಿ ಯುತ್ತದೆ. ಹಾಗೆಯೇ ಧಾರ್ಮಿಕ ಆಂದೋಲನದ ಸೆಳವಿನಲ್ಲಿ ಸಿಕ್ಕ ಸಮಾಜ ತಮ್ಮಲ್ಲಿ ಆ ಮುಂಚೆ ಬಳಕೆಯಲ್ಲಿದ್ದ ದರಿದ್ರ ಆಚರಣೆಗಳನ್ನು ಈ ಸೆಳವಿನಲ್ಲಿ ಕಳಚಿಕೊಳ್ಳುತ್ತದೆ. ಉದಾಹರಣೆಗೆ ವಚನಕಾರರ ಕಾಲದಲ್ಲಿ ಆಂದೋಲನದ ಸೂಚನೆಗಳು ಕಂಡು ಬಂದಾಗ ಆ ಮುಂಚೆ ಪ್ರಚಲಿತವಿದ್ದ ಅನೇಕ ದೇವೋಪಾಸನೆ, ಯಜ್ಞ, ಕಾಲ ಗಳಿಗೆಯ ನಂಬಿಕೆ, ಜಾತಿ ವಿಭಾಗ ಇತ್ಯಾದಿ ಹಲವು ಕೆಟ್ಟ ಸಂಪ್ರದಾಯಗಳು ಕೊಚ್ಚಿಹೋದವು. ಹೀಗೆ ಕೊಚ್ಚಿ ಹೋಗಲು ಕಾರಣ ಜನತೆಗೂ ಅಂತಹ ಆಚರಣೆಗಳಲ್ಲಿ ನಂಬಿಕೆ ಕುಸಿದುದೇ ಆಗಿದೆ. ವಚನಕಾರರ ಪೂರ್ವದ, ಸಮಕಾಲೀನದ ಸಮಾಜ ಹಲವು ದೈವ ಗಳನ್ನು ನಂಬಿ ಯಾವ ನೆಮ್ಮದಿಯನ್ನು ಪಡೆದಿರಲಿಲ್ಲ. ಜಾತೀಯ ಕಲ್ಪನೆಯ

ಸಮಾಜದಿಂದ ಅಪಾರ ಶೋಷಣೆ ಹಾನಿಗಳು ತೀವ್ರವಾಗಿ ಆಗಿದ್ದವು. ಕೀಳು ಕುಲದವನೆಂಬ ಜನಾಪವಾದಕ್ಕೆ ಒಳಗಾಗಿ ಎಲ್ಲ ಸಾಮಾಜಿಕ ಸ್ಥಾನಮಾನ ಗಳಿಂದಲೂ ವಂಚಿತರಾಗಿದ್ದರು. ದೇವ ಮತ್ತು ಭಕ್ತರ ನಡುವೆ ಪೂಜಾ ರಿಯ ಆಟಾಟೋಪಗಳು ಹೇಳಲಸದಳವಾಗಿ ಬೆಳೆದಿದ್ದವು. ಭಕ್ತನಿಗೆ ತಾನೂ ದೇವರನ್ನು ನೇರವಾಗಿ ಪೂಜಿಸಬೇಕೆಂಬ ಅಭಿಲಾಷೆ ಮನದಲ್ಲಿ ಸ್ಥಿರವಾಗಿತ್ತು ಈ ಎಲ್ಲಾ ಆಶಯಗಳನ್ನು ನೆರವೇರಿಸಿಕೊಳ್ಳಬೇಕಾಗಿತ್ತು. ಇದಿಲ್ಲದೆ ಅವರ ಮನ ಅತೃಪ್ತಿಯ ಕಣಜವಾಗಿತ್ತು. ಇರುವ ವ್ಯವಸ್ಥೆಯ ಬಗ್ಗೆ ತೆಗೆದಷ್ಟು ಅತೃಪ್ತಿಯ ಧಾನ್ಯವನ್ನು ಪಡೆಯಬಹುದಿತ್ತು. ಇವೆಲ್ಲಕ್ಕೆ ಹೊರದಾರಿ ವಚನ ಅದರಲ್ಲೂ ಬಸವಣ್ಣ ಕಾರಣವಾಗಿ ಗೋಚರಿಸಿತು.

ತಮಿಳು ಪುರಾತನರ ಕಾಲದಲ್ಲಿ ಉಂಟಾದ ಆಂದೋಲನವಾದರೂ ಬ್ರಹ್ಮ ಸಮಾಜ ಉದಯವಾದಂತೆಯೇ ಇದೆ. ಶಿವೋಪಾಸನೆಯಲ್ಲಿ ಶ್ರದ್ಧೆ, ಭಕ್ತಿ ಬೆಳೆ ಸುವುದು, ಶಿವಧರ್ಮಪ್ರಚಾರ ಮಾಡುವುದು, ಶಿವಸರ್ವೋತ್ತಮ ಎಂಬುದನ್ನು ಭದ್ರಗೊಳಿಸುವುದು ಇವರ ಮೂಲ ಧ್ಯೇಯವಾಗಿದ್ದಿತು. ಆ ಮುಂಚೆ ಜೈನ, ಬೌದ್ಧ, ವೈಷ್ಣವ ಧರ್ಮಗಳ ದೆಸೆಯಿಂದಾಗಿ ಶೈವಧರ್ಮ ಇಳಿಗಾಲ ಕಂಡಿತ್ತು. ಜೈನಧರ್ಮದ ಪ್ರಪಂಚವನ್ನೇ ನಿರಾಕರಿಸಬೇಕೆಂದು ಸಾರುತ್ತ ತನ್ನ ಆಚರಣೆ ಗಳನ್ನು ಸಂಸ್ಥಾಪಿಸಿತ್ತು. ಜೈನಧರ್ಮದ ಆಚರಣೆಗಳು ಸಾಮಾನ್ಯರಿಗೆ ಬಾಯಲ್ಲಿ ಬಿದ್ದ ಬಿಸಿ ತುಪ್ಪವಾಗಿತ್ತು. ಬೌದ್ಧ ಧರ್ಮವಾದರೋ ಕಾಮೋಪ ಭೋಗದಲ್ಲಿ ಸುಖವಿದೆ ಎಂದು ತಿಳಿಯುವುದು ಹೀನವೆಂದೂ, ನಾನು ಜೀವ ಸಿದ್ದೇನೆ. ನನಗೆ ಮರಣವಿದೆ. ನನಗೆ ರೋಗ ಬರುತ್ತದೆ. ನನಗೆ ದುಃಖ ಬರುತ್ತದೆ. ನನಗೆ ಆಪ್ತರ ವಿಯೋಗ ದುಃಖ ತರುತ್ತದೆ. ಇದರಿಂದ ಪ್ರಪಂಚ ದುಃಖಕರ. ಆದ್ದರಿಂದ ನಾನು ಇವುಗಳನ್ನು ಗೆಲ್ಲಬೇಕು. ನಾನು ಬೋಧಿಸತ್ವನಾಗಬೇಕು ಎಂದು ಸಾರುತ್ತಿತ್ತು. ಪ್ರಪಂಚದಲ್ಲಿ ದುಃಖ ಇದೆ ನಿಜ. ಹಾಗೆಯೇ ಸುಖವೂ ಇದೆಯಲ್ಲ. ಆ ಸುಖವನ್ನು ಪಡೆಯುವುದರತ್ತ ಜನರ ಮನಸ್ಸು ಇತ್ತು. ಅವರಿಗೆ ಈ ದೊಡ್ಡ ತತ್ವವೇನೋ ಚೆನ್ನಾಗಿ ಕಾಣುತ್ತಿತ್ತು. ಆದರೆ ಆಚರಿಸಬಹುದು ಬೋಧಿಸತ್ವನಾಗುವುದು, ಭವಗೆಲ್ಲುವುದು ತಮಗೆ ಎಟುಕಲಾರದವುಗಳಾಗಿದ್ದವು. ಜನತೆಗೆ ಪ್ರಪಂಚವೂ ಬೇಕು ಧರ್ಮವೂ ಬೇಕು. ಸುಖವೂ ಬೇಕು ಮೋಕ್ಷವೂ ಬೇಕು. ಇಂತಹ ಧರ್ಮವೊಂದರ

ಅವಶ್ಯವಿತ್ತು. ಬಿಲ್ವ, ಬೆಳವಲ ಕಾಯಿ ಒಂದಾಗಿ ಹಿಡಿಯಬಾರದು. ಹಿಡಿದರೆ ತಪ್ಪೇನು. ಬಿಲ್ವದ ಕಾಯಿ ತಲೆಗೆ, ಬೆಳವಲ ಕಾಯಿ ತಿನ್ನುವುದಕ್ಕೆ ಹೀಗಿತ್ತು ಅವರ ವಿಚಾರ ಸರಣಿ. ಇದರಿಂದ ಅಪ್ಪಾರ್, ಸಂಬಂಧಾರ್, ಇತರ ಪುರಾತನರು ಪ್ರಚಾರ ಮಾಡಿದ ಶೈವಧರ್ಮ ಬಹು ಬೇಗ ಪ್ರಚಾರ ಪಡೆಯಿತು. ಜನವ-ನ ಗೆದ್ದರು. ಈ ದಿಸೆಯಲ್ಲಿ ಚೋಳರು, ಪಲ್ಲವರು, ಪಾಂಡ್ಯ ರಾಜರು ನೀಡಿದ ಬೆಂಬಲ ಅಪರಿಮಿತವಾದುದು. ಶೈವಧರ್ಮ ಅವರನ್ನು ತನ್ನ ಪ್ರಭಾವಲಯಕ್ಕೆ ತೆಗೆದುಕೊಂಡು ವ್ಯಾಪಕ ಬೆಳವಣಿಗೆ ಪಡೆಯಿತು.

ಜೈನ ಮತ್ತು ಬೌದ್ಧ ಧರ್ಮಗಳು ಜನರಲ್ಲಿ ಭಾವನಾತ್ಮಕ ಸಂಬಂಧಗಳನ್ನು ನಿವಾರಿಸತೊಡಗಿತ್ತು. ಯಾವತ್ತು ಜನರು ಭಾವನಾತ್ಮಕ ಸಂಬಂಧಕಳಕೊಳ್ಳಲು ಸಿದ್ಧರಿಲ್ಲ. ವಿಚಾರದಿಂದ ಮನಸ್ಸು, ಹೃದಯಗಳು ಒಣ ಒಣವಾಗ ಹತ್ತಿದವು. ತಾನು, ತನ್ನವರು. ತನ್ನನ್ನು ಕಾಪಾಡುವ ದೇವರು ಮನಸ್ಸಿಗೆ, ಹೃದಯಕ್ಕೆ ಏನೋ ಒಂದು ಆರ್ದ್ರ ಹೃದಯವನ್ನು ತುಂಬಿ ಬಿಟ್ಟವು. ತನ್ನ ಆಪತ್ತಿಗೆ ಕಾಯುವ ದೇವನೊಬ್ಬನಿದ್ದಾನೆ ಎಂಬ ನಂಬಿಕೆಯೇ ದೊಡ್ಡ ಹೊರೆಯನ್ನು ತಳ್ಳಿ ಎಷ್ಟೋ ನೆಮ್ಮದಿ ನೀಡುತ್ತದೆ. ಜನರ ನಂಬಿಕೆಗೆ ಊರೆಗೋಲಾಗಿ ಶಿವಧರ್ಮಬಂತು. ದೇವನನ್ನು ಹೇಗೆ ಬೇಕಾದರೂ ಪೂಜಿಸಿ ಒಲಿಸಿಕೊಳ್ಳಬಹುದೆಂಬ ಶ್ರದ್ಧೆಯೇ ಮರುಭೂಮಿಯಲ್ಲಿ ಸಿಕ್ಕ ಚಿಲುಮೆಯಂತಿತ್ತು. ಹೀಗಾಗಿ ಶೈವಧರ್ಮ ಅದುವರೆಗಿನ ಸಮಾಜದ ಅತೃಪ್ತಿಯ ಹಸಿವು ಹಿಂಗಿಸಲು ಓಗರವಾಗಿ ಬೆಳೆದು ಬಂತು.

**ಆರ್ಥಿಕ ಕಾರಣಗಳು**

ಪ್ರಾಚೀನಕಾಲದಲ್ಲಿ ಆರ್ಥಿಕ ಹಿಡಿತ ರಾಜಕೀಯ ಕ್ಷೇತ್ರದೊಂದಿಗೆಯೇ ಇತ್ತು. ಇದರಿಂದ ಆರ್ಥಿಕ ಕಾರಣಗಳು ರಾಜಕೀಯ ಪರಿವಲಯದಲ್ಲಿಯೇ ಅಲ್ಪಪ್ರಮಾಣದ ಆಂದೋಲನದ ಉಗಮಕ್ಕೆ ಕಾರಣ ಆಗುತ್ತಿದ್ದವು. ವ್ಯಾಪಾರ, ಕೈಗಾರಿಕೆ, ಕೃಷಿ ಇತ್ಯಾದಿ ಉತ್ಪನ್ನ ವಲಯಗಳು ರಾಜಕೀಯ ಕ್ಷೇತ್ರದ ಹಿಡಿತವಿದ್ದೂ ಅವುಗಳಿಂದ ದೂರವಾಗಿ ಇರಬಲ್ಲವುಗಳಾಗಿವೆ. ಅಲ್ಲದೆ ಈ ವಲಯದ

ಮಾಲೀಕರು ಅರ್ಥಾತ್ ಬಂಡವಾಳಷಾಹಿಗಳು ರಾಜಕಾರಣಿಗಳನ್ನು ಕೊಂಡು ಕೊಳ್ಳುವಷ್ಟು ಭದ್ರವಾಗಿದ್ದಾರೆ. ಇದರಿಂದ ಆಂದೋಲನಗಳು ಆರ್ಥಿಕ ಕಾರಣ ವಾಗಿಯೇ ಉಂಟಾಗುವ ಬೆಳವಣಿಗೆಗಳು ಹೆಚ್ಚುತ್ತಿವೆ.

ಇಂತಹ ಆಂದೋಲನಕ್ಕೆ ಸ್ಪಷ್ಟ ಉದಾಹರಣೆಯಾಗಿ ಪ್ರತಿಯೊಂದು ದೇಶ ದಲ್ಲಿಯೂ 18 ನೇ ಶತಮಾನದ ನಂತರದ ವಿದ್ಯಮಾನಗಳನ್ನು ಹೆಸರಿಸಬಹು ದಾಗಿದೆ. ಯುರೋಪ್ ದೇಶದಲ್ಲಿ ಕೈಗಾರಿಕೆಯು ಬೆಳವಣಿಗೆಯಿಂದ ಬಂಡವಾಳ ಷಾಹಿ ವ್ಯವಸ್ಥೆ ರೂಪಿತಗೊಂಡು ಆರ್ಥಿಕ ಶೋಷಣೆ ಎದ್ದು ಕಾಣುವಷ್ಟು ಗೋಚರವಾಯಿತು. ಬಂಡವಾಳ ಹಾಕುವ ಶ್ರೀಮಂತರು ಕೈಗಾರಿಕೆಗಳನ್ನು ಕಾರ್ಮಿಕರ ದುಡಿಯುವ ಕೇಂದ್ರಗಳನ್ನಾಗಿ ಮಾಡಿ ಅದರ ಉತ್ಪನ್ನವನ್ನೆಲ್ಲ ತಾವೇ ಅನುಭೋಗಿಸತೊಡಗಿದರು. ಕಾರ್ಮಿಕನಿಗೆ ಕೂಲಿಯನ್ನು ಕೊಟ್ಟು ಆತನ ದುಡಿಮೆಯಿಂದ ಆತ ಬದುಕಲಾರದಂತಹ ಸ್ಥಿತಿಗೆ ತಳ್ಳಿದರು. ಕೈಗಾರಿಕೆ ಯಿಂದಾಗಿ ಕಾರ್ಮಿಕರು ಹೆಚ್ಚಿದರು. ಕಾರ್ಮಿಕರು ದಿನೇ ದಿನೇ ಶೋಷಿತರಾ ಗುತ್ತ ಆರ್ಥಿಕ ಹೊಡೆತಗಳಿಂದ ಜೀರ್ಣವಾಗುತ್ತ ಹೋದರು. ಅಲ್ಲದೆ ಕೈಗಾರಿ ಕೆಯಿಂದಾಗಿ ಹಳ್ಳಿಯಿಂದ ನಗರಕ್ಕೆ ಒಲಸೆ ಬರುವ ಜನರು ಹೆಚ್ಚಿದರು. ನಿರು ದ್ಯೋಗಿಗಳ ತುಕಡಿಯನ್ನೇ ಕೈಗಾರಿಕೆ ಉಂಟುಮಾಡಿತು. ಹಣಬಳಸಿಕೊಂಡು ಬಂಡವಾಳ ಷಾಹಿಗಳು ದಡೂತಿ ಬಂಡವಾಳಷಾಹಿಗಳಾದರು. ಹೊಲ, ಗದ್ದೆ ಇತ್ಯಾದಿ ಜಮೀನು ಮಾಧ್ಯಮಗಳಿಂದ ಬೇಸಾಯುಮಾಡುವ ಕೂಲಿಗಾರರಿಂದ ಭೂಮಾಲೀಕರು ಶ್ರಿಮಂತರಾದರು. ಹಳ್ಳಿ, ನಗರ ಎರಡರಲ್ಲೂ ಶೋಷಣೆ ಹೆಚ್ಚಿತು. ಆರ್ಥಿಕ ಪೆಟ್ಟುಗಳಿಂದ ಕಂಗಾಲಾದ ಜಡಜನತೆ, ಕಾರ್ಮಿಕ ವರ್ಗ ರೊಚ್ಚಿಗೇಳಬೇಕಾದ ಪರಿಸ್ಥಿತಿ ಉಂಟಾಯಿತು. ರೋಸಿಹೋದ ಜನತೆಗೆ ಯಾಕೆ ಹೀಗೆ ಪರಿಸ್ಥಿತಿ ವಿಕೋಪಕ್ಕೆ ಹೋಯಿತೆಂಬ ತಿಳಿವಳಿಕೆ ಇಲ್ಲದಾಗ ಮಧ್ಯಮ ವರ್ಗದಿಂದ ಬಂದ ದುಡಿಯುವ ಮತ್ತು ಯೋಚನೆಮಾಡುವ ಸಾಮರ್ಥ್ಯವುಳ್ಳ ಮಾರ್ಕ್ಸ್ ಮತ್ತು ಲೆನಿನ್‌ರು ಜನಗಳಿಗೆ ಕತ್ತಲೆಯಲ್ಲಿ ದೊರೆತ ದೀಪವಾದರು. ಅವರ ವಿಚಾರ ಧಾರೆಯ ಪ್ರಕಾರದಲ್ಲಿ ಶ್ರಮಿಕಜನತೆ ಹೊಸ ಹೆಜ್ಜೆ ಇಟ್ಟರು. ಆಂದೋಲನದಲ್ಲಿ ದುಮುಕಿತು.

ಆರ್ಥಿಕ ಕಾರಣವಾಗಿ ಉಂಟಾದ ಆಂದೋಲನಕ್ಕೆ ನಮ್ಮ ಭಾರತದ ಸ್ವಾತಂತ್ರ್ಯ ಸಂಗ್ರಾಮ ಕೂಡ ಉತ್ತಮ ಉದಾಹರಣೆ ಆಗಿದೆ. ಇದರಂತೆಯೇ ಅಮೇರಿಕನ್ ಕಾಲೊನಿಸ್ಟ್ ಮತ್ತು ಇಂಗ್ಲೆಂಡ್‌ನಿಂದ ಬಂದು ಅಮೆರಿಕದಲ್ಲಿ ನೆಲೆಸಿ ತಮ್ಮ ಕಾಲಮೇಲೆ ತಾವು ನಿಂತ ಜನತೆಯು ನಡುವೆ ಆದ ಆಂದೋಲನ ಕೂಡ ಇದಕ್ಕೆ ತಕ್ಕ ಉದಾಹರಣೆಯಾಗಿದೆ. ದೂರದ ಬ್ರಿಟನ್ನಿನಲ್ಲಿದ್ದ ಇಂಗ್ಲಿಷರು ಅಮೇರಿಕದ ಕಾಲೊನಿಸ್ಟರ ಮೇಲೂ, ಅಮೇರಿಕದ ಕಾಲೊನಿಸ್ಟರು ಅಲ್ಲಿನ ಭೂಮಾಲಿಕರು, ದುಡಿಮೆಗಾರರ ಮೇಲೂ ಇಟ್ಟುಕೊಂಡಿದ್ದ ಹಿಡಿತಗಳು ಭದ್ರವಾದಂತೆಲ್ಲ ಆಂದೋಲನಕ್ಕೆ ಪೂರ್ವ ಪೀಠಿಕೆಯಾಗತೊಡಗಿತು.

ನಮ್ಮ ಸಮಕಾಲೀನದಲ್ಲಿಯೇ ಸಣ್ಣ ಪ್ರಮಾಣದಲ್ಲಿಯಾದರೂ ಆರ್ಥಿಕ ಕಾರಣವಾಗಿ ಉಂಟಾದ ವರ್ಗ ಹೋರಾಟ ಮತ್ತು ಜಾತಿ, ಧರ್ಮಗಳ ನಡುವೆಯ ಹೋರಾಟವಾದ ವಿಲ್ಲುಪುರಂ ನಾಡಿನ ಗಲಬೆಯೊಂದನ್ನು ಇಲ್ಲಿ ಹೆಸರಿಸಬಹುದು. ಜುಲೈ 25, 1978ರಲ್ಲಿ ನಡೆದ ಹೋರಾಟ ವರ್ಗ ವರ್ಗಗಳ ನಡುವೆ ಮತ್ತು ಜಾತಿ ಜಾತಿಗಳ ನಡುವೆ ಆದುದಾಗಿತ್ತು. ವರ್ಗ ಮತ್ತು ವರ್ಣಗಳಿಂದ ಏಟುತಿಂದ ಹೊಲೆಯರನ್ನು[18] ಅಮಾನುಷವಾಗಿ ನಡೆಸಿಕೊಳ್ಳಲಾಯಿತು. ಜೀವಸಹಿತ ಸುಟ್ಟರು. ಮನೆಗುಡಿಸಲುಗಳಿಗೆ ಬೆಂಕಿಹಚ್ಚಿದರು. ಕುಡಿಯಲು ನೀರು ಸಿಗದಂತೆ ಹೊಲೆಯರ ಮೇಲೆ ಸವರ್ಣೀಯ ಹಿಂದೂಗಳು, ಮುಸ್ಲಿಮರು ದೌರ್ಜನ್ಯ ನಡೆಸಿದರು.

ವಿಲ್ಲಪುರಂ ತಮಿಳುನಾಡಿನ ದಕ್ಷಿಣ ಆರ್ಕಾಟ ಜಿಲ್ಲೆಯ ವ್ಯಾಪಾರ ಕೇಂದ್ರ. ಇಲ್ಲಿ ಮೂಲತಃ ವಾಸಿಸುತ್ತಿದ್ದವರು. ಹೊಲೆಯರು. ಇವರ ಸಂಖ್ಯೆ ಈಗಲೂ ಸವರ್ಣೀಯರಿಗಿಂತ ಹಿಂದೂಗಳಿಗಿಂತ ಹೆಚ್ಚಿದೆ. ಇತರ ಹಿಂದೂಗಳು, ಮುಸ್ಲಿಮತ್ತುಮರು ವ್ಯಾಪಾರಕ್ಕಾಗಿ ಬಂದು ಇಲ್ಲಿ ನೆಲೆಯೂರಿದರು. ಅಲ್ಲದೆ ಭೂ ಒಡೆನತಆರ್ಥಿಕ ಹಿಡಿತವಿರುವ ಕೇಂದ್ರಗಳಲ್ಲಿ ಯಜಮಾನಿಕೆಯನ್ನು ಸ್ಥಾಪಿಸಿಕೊಡರು. ಹೊಲೆಯರನ್ನು ಪೂರ್ಣವಾಗಿ ಕಾಫಿ, ಕೂಲಿ ಇತ್ಯಾದಿಗಳೆಡೆ ದುಡಿಸಿಕೊಳ್ಳುವುದರಲ್ಲಿ ಯಶಸ್ವಿಯಾದವರು. ಹೊಲೆಯರನ್ನು ಎಲ್ಲ ಉತ್ಪಾದನಾ ವಲಯ

18. ಇಲ್ಲಿ ನಾನು ಬೇಕೆಂದೇ ಹರಿಜನರೆಂದು ಹೆಸರಿಸಿಲ್ಲ. ಹರಿಜನರೆಂದು ಕರೆಯುವುದರಿಂದ ಯಾವ ವ್ಯತ್ಯಾಸವೂ ನನಗೆ ಕಾಣದು. ಸಾಮಾಜಿಕ, ಸಾಂಸ್ಕೃತಿಕವಾಗಿ ತೀವ್ರ ಪೆಟ್ಟು ತಿನ್ನುತ್ತಿರುವವರ ಜೀವನ ಮಟ್ಟವನ್ನು ಸುಧಾರಿಸದೆ. ಹೆಸರಿನ ನಾಮಾಂತರ ಮಾಡುವುದರಿಂದ ಯಾವ ಪ್ರಯೋಜನವೂ ಇಲ್ಲ.

ಗಳಲ್ಲಿ ದುಡಿಸಿಕೊಂಡರು. ಅವರ ಆರ್ಥಿಕ ಮಟ್ಟವನ್ನು ದಿನೇ ದಿನೇ ಕುಸಿಯು ವಂತೆ ಮಾಡಿದರು. ಶ್ರಮದ ಶೋಷಣೆ, ಕಡಿಮೆ ಹಣ ಕೊಡುವುದರ ಮೂಲಕ ಮುಂದುವರಿಯಿತು. ಇದರ ತಿಳುವಳಿಕೆ ಪಡೆದ ಹೊಲೆಯರು ತಮ್ಮ ತಮ್ಮಲ್ಲಿ ಸಂಘಟಿತರಾದರು. ಕೂಲಿ ಸಂದರ್ಭದಲ್ಲಿ ಬಸ್ ಪ್ರಯಾಣಿಕರ ನಡುವೆ ಗಲಬೆಯಾಯಿತು. ಇದು ಕೂಲಿಯುವರು ಹೆಚ್ಚು ಹಣ ಕೇಳುವ ದಾಗಿತ್ತು. ಆದರೆ ಬಸ್ ಮಾಲಿಕರು ಒಂದಾಗಿ ಕೂಲಿಗಳಿಗೆ ಬುದ್ಧಿ ಕಲಿಸಲು ಒಂದು ದಿನ ಬಸ್ ಸಂಚಾರ ನಿಲ್ಲಿಸಿದರು. ಕೂಲಿಯಿಂದ ಹೊಟ್ಟೆ ತುಂಬಿಕೊಳ್ಳ ಬೇಕಿದ್ದ ಕೂಲಿಗಳಿಗೆ ಇದರಿಂದ ಉಪವಾಸ ಬಿದ್ದು ರೊಚ್ಚಿಗೇಳುವಂತಾಯಿತು.

ಹೊಲೆಯ ಹೆಣ್ಣೊಬ್ಬಳೊಡನೆ ಇತರ ಹಿಂದೂ ಒಬ್ಬ ಅನೈತಿಕ ಸಂಬಂಧ ಇಟ್ಟುಕೊಂಡಿದ್ದ ಅವನನ್ನು ಹೊಲೆಯರು ಚಚ್ಚಿ ರೋಷ ತೀರಿಸಿಕೊಂಡರು. ವ್ಯಾಪಾರಿಗಳು, ಭೂಮಾಲಿಕರು, ಅಧಿಕಾರಿಗಳು, ರಾಜಕಾರಣಿಗಳು ಹೊಲೆಯರ ಮೇಲೆ ಪ್ರತಿಕಾರ ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದರು. ಈ ಸಂಗ ತಿಯನ್ನೇ ನೆವಮಾಡಿಕೊಂಡು ಗೂಂಡಾಗಳ ಮುಂದಾಳುತನದಲ್ಲಿ ಹೊಲೆಯ ಕೇರಿಗಳಿಗೆ ಬೆಂಕಿಇಟ್ಟರು 300ಕ್ಕೂ ಹೆಚ್ಚು ಗುಡಿಸಲುಗಳು ಭಸ್ಮ ಆದವು. ಹೊಲೆಯರ 130ಕ್ಕೂ ಹೆಚ್ಚು ಕುಟುಂಬಗಳಿಗೆ ಆಶ್ರಯವಿಲ್ಲವಾಯಿತು. 24ಕ್ಕೂ ಹೆಚ್ಚು ಹೊಲೆಯರನ್ನು ಇರಿದು ಕೊಂದರು. ಎಂಟು ಜನ ಹೊಲೆಯರನ್ನು ಜೀವಸಹಿತ ಸುಟ್ಟರು. ಹೊಲೆಯರು ವಿಲ್ಲುಪುರಂ ಬಿಟ್ಟು ಓಡಿ ಹೋಗುವಂತೆ ಮಾಡಿದರು. ಊಟ, ವಸತಿ, ನೀರಿಗೆ ಅಪಾರ ಬವಣೆ ಪಡುವಂತೆ ಮಾಡಿ ದರು. ಗೂಂಡಾಗಳ ಮುಂದಾಳುತನದಲ್ಲಿ ಊರಿಗೆ ಬಸ್ ಇತ್ಯಾದಿ ವಾಹ ನಗಳು ಅಗ್ನಿ ಶಾಮಕದಳ ಬರದಂತೆ ತಡೆದರು. ಹೊಲೆಯರು ವಿಲ್ಲುಪುರಂನ ಸುತ್ತಮುತ್ತಲ ಹಳ್ಳಿಗಳಿಂದ ಹೊಲೆಯರನ್ನು ಸಂಘಟಿಸಿ ಇತರ ಹಿಂದೂ ಮತ್ತು ಮುಸ್ಲಿಂಜನಾಂಗಗಳ ಮೇಲೆ ಬೀಳಲು ಪ್ರಯತ್ನಿಸಿದರು. ಮನೆಗಳಿಗೆ ಬೆಂಕಿ ಹಚ್ಚಲು ಪ್ರಯತ್ನಿಸಿ ವಿಫಲರಾದರು. ಪ್ರಜಾಸತ್ತಾತ್ಮಕ ಗಣತಂತ್ರ ರಾಜ್ಯವಾದ ನಮ್ಮ ದೇಶದಲ್ಲಿ ಇವತ್ತಿಗೂ ಹೊಲೆಯರ ಸ್ಥಿತಿಗತಿಗಳು ಇಷ್ಟೊಂದು ಚಿಂತಾಜನಕ ಸ್ಥಿತಿಗೆ ಇಳಿದುದು ಮಾನವೀಯ ಗುಣಕ್ಕೆ ಮಸಿ ಬಳಿದಂತಾಗಿದೆ. ದೌರ್ಜನ್ಯ, ಕಗ್ಗೊಲೆ, ಆರ್ಥಿಕ ಶೋಷಣೆಯಿಂದ ದಿನದಿನವೂ ರೋಸಿಹೋದ ಹೊಲೆಯರು ಪೆಟ್ಟುತಿಂದ ಹುಲಿಯಂತಾಗಿದ್ದಾರೆ. ಗಾಯಗೊಂಡ ಹುಲಿ ಅವಕಾಶ ಕಾದು

ಸೇಡು ತೀರಿಸಿಕೊಳ್ಳುವಂತೆ ಹೊಲೆಯರು ಪ್ರತೀಕಾರಕ್ಕೆ ಸಮಯ ಕಾಯುತ್ತಿದ್ದಾರೆ. ಸವರ್ಣೀಯ ಹಿಂದೂ ಮತ್ತು ಮುಹಮ್ಮದೀಯರ ಮೇಲೆ, ಆರ್ಥಿಕವಾಗಿ ಸುಸ್ಥಿತಿಯಲ್ಲಿರುವ ಬಂಡವಾಳಷಾಹಿಗಳು, ಅಧಿಕಾರಿಗಳು, ರಾಜಕಾರಣಿಗಳು, ವ್ಯಾಪಾರಸ್ಥರು ಈ ವರ್ಗದ ಮೇಲೆ, ಶೋಷಿತವರ್ಗ ತನ್ನ ಬಂಡಾಯ್ಯವನ್ನು ಮುಂದುವರಿಸುವ ಸೂಚನೆಗಳಿವೆ.

ಆರ್ಥಿಕ ಕ್ಷೇತ್ರ ಕೈಗಾರಿಕೆ, ವ್ಯಾಪಾರಗಳಿಂದ ಪ್ರತ್ಯೇಕವಾಗಿ ಪ್ರಮುಖ ಸ್ಥಾನ ಗಳಿಸಿಕೊಳ್ಳುತ್ತಿದೆ. ಈ ವಲಯ ಪ್ರತ್ಯೇಕಗೊಂಡಂತೆಲ್ಲ ಹಣದ ಶೇಖರಣೆ, ಹಿಡಿತ ಇವು ಹೆಚ್ಚುತ್ತ ಇವುಗಳ ಮಾಧ್ಯಮದಲ್ಲಿ ಜನತೆಯನ್ನು ಶೋಷಿಸುವುದು ಕಮ್ಯುನಿಸ್ಟ್ ದೇಶಗಳಲ್ಲಿಯೂ ಮುಂದುವರಿಯುತ್ತಿದೆ. ಮಾರ್ಕ್ಸ್ ಸಿದ್ಧಾಂತ ಬಂಡವಾಳಷಾಹಿಗಳ ನಿರ್ನಾಮಕ್ಕೆ ಯೋಜನೆ ಹಾಕಿತಾದರೂ ಆರ್ಥಿಕ ಹಿಡಿತ ರಾಜಕಾರಣಿಗಳು, ಅಧಿಕಾರಿಗಳ ಮೂಲಕ ನಿಯಂತ್ರಿತವಾಗುತ್ತಿದೆ. ಈ ವಲಯಗಳಲ್ಲಿ ಕೆಲವೊಂದು ವರ್ಗದವರೇ ಪ್ರಮುಖವಾಗಿ ಮತ್ತೆ ಮತ್ತೆ ಆ ಸ್ಥಾನ ತುಂಬಿಕೊಳ್ಳುತ್ತಿರುವುದರಿಂದ ಶೋಷಣೆ ಇನ್ನೂ ಮುಂದುವರೆಯುತ್ತಲೇ ಇದೆ.

**ಆಂದೋಲನದ ಪ್ರಣಾಲಿಕೆಗಳು**

ಪ್ರತಿಯೊಂದು ಆಂದೋಲನವೂ ಖಚಿತರೂಪ ಪಡೆಯುವುದು ಅದರ ಪ್ರಣಾಲಿಕೆಗಳಿಂದ. ಇವುಗಳು ಘೋಷಣೆಗಳಾಗಿಯೋ, ಆಚರಿಸುವ ವಿಧಿಗಳಾಗಿಯೋ ವ್ಯಕ್ತವಾಗಿ ಸಂಘಟನೆಗೆ ಕಾರಣ ಆಗುತ್ತವೆ. ಈ ಪ್ರಣಾಲಿಕೆಗಳು ಹೇಳುವುದನ್ನು ಸಂವಹನಿಸುತ್ತವೆ ಮಾತ್ರ ಅಲ್ಲ ಪ್ರತಿಭಟನೆ, ವಿರೋಧ ವ್ಯಕ್ತವಾಗುವುದು ಇವುಗಳನ್ನು ಹೇಳುವುದರಿಂದ ಮತ್ತು ಆಚರಿಸುವುದರಿಂದ ಆಂದೋಲನದ ಸಂದರ್ಭದಲ್ಲಿ ಇವು ಸಂದರ್ಭಕ್ಕೆ ತಕ್ಕಂತೆ ಕ್ರಮಕ್ರಮೇಣ ಬೆಳವಣಿಗೆ ಪಡೆಯುತ್ತವೆ. ನಂತರ ಇವು ಆಂದೋಲನಕಾರನ ಅನುಯಾಯಿಗಳಿಂದ ಸಿದ್ಧಾಂತರೂಪದಲ್ಲಿ ಸಂಗ್ರಹವಾಗುತ್ತವೆ. ಆಂದೋಲನದ ಗುರಿ ಮುಖ್ಯವಾಗಿ ಎರಡು:- 1) ಇರುವ ವ್ಯವಸ್ಥೆಯನ್ನು ಒಪ್ಪಿಕೊಂಡು ಅದರಲ್ಲಿರುವ ಕೆಲವು ದೋಷಗಳನ್ನು ತೆಗೆದುಹಾಕುವುದು. ಸುಧಾರಿತರೂಪದ ಆಚರಣೆಗಳನ್ನು, ನಿಯಮಾವಳಿಗಳನ್ನು ಸೇರಿಸುವುದು. 2) ಇರುವ ವ್ಯವಸ್ಥೆಯನ್ನು

ಪೂರ್ಣವಾಗಿ ನಿರಾಕರಿಸುವುದು. ಆ ಮೂಲಕ ಉದ್ದೇಶಿತವಾದ ಮತ್ತೊಂದು ವ್ಯವಸ್ಥೆಯನ್ನು ತರುವುದು.

ಆಂದೋಲನಕಾರನ ಧೋರಣೆಗನುಗುಣವಾಗಿ ಈ ಎರಡರಲ್ಲಿ ಒಂದು ಆಂದೋಲನಕ್ಕೆ ಕಾರಣ ಆಗಿರುತ್ತದೆ. ಸಾಮಾನ್ಯವಾಗಿ, ಆಂದೋಲನ ಕ್ರಾಂತಿ ತಂದರೆ ಚಳುವಳಿ ಸುಧಾರಣೆ ತರುತ್ತದೆ. ಆದರೆ ಆಂದೋಲನವೇ ಕ್ರಾಂತಿ ಎನ್ನಿಸಿಕೊಳ್ಳುವುದಿಲ್ಲ. ಚಳುವಳಿಯೇ ಸುಧಾರಣೆ ಆಗುವುದಿಲ್ಲ. ರಾಜಕೀಯ ಧಾರ್ಮಿಕ ಆರ್ಥಿಕ ಯಾವುದೇ ಒಂದು ಕ್ಷೇತ್ರದಲ್ಲಿ ಉಂಟಾದ ಚಳುವಳಿ ಅದು ಬೇರೊಂದು ಕ್ಷೇತ್ರಕೆ ಪ್ರಭಾವ ಬೀರದಿದ್ದರೆ, ಸುಧಾರಣೆಯಲ್ಲಿ ಪರ್ಯವಸಾನವಾದರೆ ಚಳುವಳಿ ಎನ್ನಿಸಿಕೊಳ್ಳುತ್ತದೆ. ಅಂತೆಯೇ ರಾಜಕೀಯ, ಧಾರ್ಮಿಕ, ಆರ್ಥಿಕ ಇವು ಮೂರರಲ್ಲಿ ಒಮ್ಮೆಲೆ ಅಥವಾ ಒಂದೊಂದು ಕ್ಷೇತ್ರದಲ್ಲಿ ಮಾತ್ರ ಉಂಟಾಗಿ ಮತ್ತೊಂದು ಕ್ಷೇತ್ರದ ಮೇಲೂ ಪ್ರಭಾವ ಬೀರಿದಾಗ ಅದರ ವ್ಯಾಪ್ತಿ ವಿಸ್ತರಿಸಿದಾಗ ಅದು ಚಳುವಳಿ ಆಗದೆ ಆಂದೋಲನ ಎನ್ನಿಸಿಕೊಳ್ಳುತ್ತದೆ. ಇಂತಹ ಆಂದೋಲನ, ಸುಧಾರಣೆಯಲ್ಲಿ ಪರ್ಯವಸಾನವಾಗಬಹುದು, ಇಲ್ಲ ಕ್ರಾಂತಿಯಲ್ಲಿ ಪರ್ಯವಸಾನವಾಗಬಹುದು.

ಭಾರತದ ಸ್ವಾತಂತ್ರ್ಯಾಂದೋಲನದ ಸಂದರ್ಭದಲ್ಲಿ 'ವಂದೇಮಾತರಂ' ಬ್ರಿಟಿಷರೆ ಭಾರತ ಬಿಟ್ಟುತೊಲಗಿ ಇತ್ಯಾದಿ ಘೋಷಣೆಗಳೂ, ವಿದೇಶೀ ವಸ್ತುಗಳನ್ನು ತಿರಸ್ಕರಿಸುವುದು ಸ್ವದೇಶೀ ವಸ್ತುಗನ್ನು ಬಳಸುವುದು. ದೇಶಭಕ್ತಿ ಮತ್ತಿತರ ಆಚರಣೆಗಳು ವ್ಯಕ್ತ ಆದವು. ಈ ಕೆಲವು ಅಂಶಗಳೇ ಉಳಿದೆಲ್ಲಕ್ಕೂ ಅನ್ವಯುವಾಗಿ ತತ್ವವನ್ನು ರೂಪಿಸಿರುತ್ತವೆ. ಇವುಗಳ ಮುಖಾಂತರ ತನ್ನ ಉದ್ದೇಶಿತ ಗುರಿಯನ್ನು ಸಾಧಿಸಿಕೊಳ್ಳುತ್ತದೆ. ಈಗ ಈ ಬಗ್ಗೆ ವಿವರವಾಗಿ ತಿಳಿಯುಬಹುದು.

## 1) ವ್ಯವಸ್ಥೆಯಲ್ಲಿ ಸುಧಾರಣೆ ತರುವುದು

ನನ್ನ ಅಧ್ಯಯನದಲ್ಲಿ ಆರಿಸಿಕೊಂಡಿರುವ ಐದು ಆಂದೋಲನಗಳಲ್ಲಿ, ರಷಿಯದ 1917 ರ ಆಂದೋಲನ ಬಿಟ್ಟು ಉಳಿದೆಲ್ಲವೂ ವ್ಯವಸ್ಥೆಯಲ್ಲಿ ಸುಧಾರಣೆಯನ್ನು ತಂದವುಗಳೆ. ಈ ಐದು ಆಂದೋಲನಗಳ ತಮಿಳು ಪುರಾತನರು,

ಮಾರ್ಟಿನ್‌ಲೂಥರ್, ಬುದ್ಧ, ವಚನಕರಾರ ಕಾಲದಲ್ಲಿ ಅದರ ತತ್ವ ಪ್ರಣಾಲಿಕೆಗಳು ಒಂದೊಂದೇ ಒಂದೊಂದೇ ಸೇರ್ಪಡೆಯಾಗುತ್ತಾಹೋದವು. ಇವರಿಗೆ ತಾವು ಆಂದೋಲನ ತರುತ್ತೇವೆಂಬ ಉದ್ದೇಶವಿರಲಿಲ್ಲ. ಮೊದಲು ಹೆಜ್ಜೆ ಇಟ್ಟು ನಂತರ ದಾರಿಯಲ್ಲಿ ಸಾಗುತ್ತಿದ್ದಂತೆ ಇತರ ದಾರಿ ಖಚಿತವಾಗುತ್ತ ಆಂದೋಲನದ ಸ್ವರೂಪ ಪಡೆಯಿತು. ಅದರಿಂದಲೇ ಇವರ ಆಂದೋಲನ ಕಾಲದಲ್ಲಿ ಮತ್ತೆ ಮತ್ತೆ ತತ್ವಪ್ರಣಾಲಿಗಳು ಸೇರ್ಪಡೆ ಆದದ್ದು. ಮತ್ತು ಅಲ್ಲಲ್ಲಿ ಕೆಲವು ತತ್ವಪ್ರಣಾಲಿಕೆಗಳು ಮತ್ತೆ ಪರಿಷ್ಕಾರಗೊಂಡು ಆಚರಣೆಗೆ ಬಂದವು.

ತಮಿಳು ನಾಡಿನ ಪುರಾತನರೆಲ್ಲ ಶಿವಭಕ್ತರು. ಇವರು ತಮ್ಮ ಆರಾಧ್ಯ ದೈವ ಶಿವನನ್ನು ವಿಧವಿಧವಾಗಿ ಪೂಜಿಸುವಲ್ಲಿ ತಮ್ಮ ಶಿವನಿಗೆ ಶಿವ ಭಕ್ತರಿಗೆ ಅರ್ಪಣೆ ಮಾಡಿಕೊಳ್ಳುವುದರಲ್ಲಿ ಅಪ್ರತಿಮರು. ಇವರ ಉದ್ದೇಶ ಭಂಗವಾದರೆ ತಮ್ಮನ್ನು ಕೊಂದುಕೊಳ್ಳುವರು. ಇಲ್ಲ ಉದ್ದೇಶಕ್ಕೆ ಅಡ್ಡಿ ತಂದವನನ್ನು ಕೊಲ್ಲುವರು. ಇಲ್ಲ ಆ ಸ್ಥಳ ಬಿಟ್ಟು ಹೋಗುವರು. ಇವರಿಗೆ ಹಸಿದು ಬಂದ ಭಕ್ತ ಶಿವನಿಗೆ ಸಮಾನ. ಆತ ಸರಿರಾತ್ರಿಯಲ್ಲಿ ಬಂದು ಬೇಡಲು ಅವನ ಇಚ್ಛೆಯನ್ನು ಪೂರೈಸುವುದು ಇವರ ವ್ರತ. ಇಳೆಯಾಂಡೆ ಗುಡಿಮಾರ, ತನ್ನಲ್ಲಿಗೆ ಸರಿರಾತ್ರಿಯಲ್ಲಿ ಹಸಿದು ಬಂದ ಭಕ್ತನಿಗೆ ಮನೆಯಲ್ಲಿ ಧಾನ್ಯವಿಲ್ಲದಾಗ ಹೊಲದಲ್ಲಿ ಬಿತ್ತಿದ್ದುದನ್ನು ಆಯ್ದು ತಂದು ಅಡಿಗೆ ಮಾಡಿಸಿ ಸತಿಪತಿಗಳು ಒಂದಾಗಿ ಭಕ್ತಿಯಿಂದ ಉಣಬಡಿಸಿದರು. ಈ ಪುರಾತನರಿಗೆ ಭಕ್ತ ಬೇರೆಯಲ್ಲ. ಶಿವಬೇರೆಯಲ್ಲ. ಆದ್ದರಿಂದಲೇ ಭಕ್ತ ವೇಷದ ಶಿವನಿಗೆ ಇಹಃಪರಗೆಯೊಂಡು ಹಿಂದುಮುಂದು ನೋಡದೆ ತನ್ನ ಪತಿಯನ್ನು ಅರ್ಪಿಸಿದ. ತನು, ಮನ ಧನ ಎಲ್ಲವನ್ನು ಇವರು ಶಿವನಿಗೆ ಶಿವಭಕ್ತರಿಗೆ ಶಿವನಸೊಮ್ಮೆಂದು ಅರ್ಪಿಸ್ತುತ್ತಾರೆ. ಶಿವ ಅಥವಾ ಶಿ ವಭಕ್ತರಿಗೆ ಕೂದಲು ಕೊಂಕಿದರೂ ಇವರ ಹೃದಯದಲ್ಲಿ ಖಡ್ಗ ಇರಿದಂತೆ ಆಗುತ್ತದೆ. ಶಿವಲಿಂಗದ ಕಣ್ಣಲ್ಲಿ ನೀರು ಬಂದರೆ ರಕ್ತ ಸುರಿದರೆ ಅದನ್ನು ಕಣ್ಣಪ್ಪ ಸಹಿಸಲಾರ. ತನ್ನ ಕಣ್ಣನ್ನೇ ಅರ್ಪಿಸುತ್ತಾನೆ. ನಿಜ ಇಲ್ಲೆಲ್ಲ ಒಂದುರೀತಿಯ ಅಂಧ ಭಕ್ತಿ ಇದೆ. ಕಣ್ಣಲ್ಲಿ ರಕ್ತ ಬಂದರೆ ಆ ಕಣ್ಣ ಕಿತ್ತು ಬೇರೆ ಕಣ್ಣಿಡುವಾಗ ನೋವಾಗುವುದಿಲ್ಲವೆ ? ಎಂದರೆ ಅದು ಮುಖ್ಯವಲ್ಲ. ಅಲ್ಲದೆ ಜಗಕ್ಕೆಎಲ್ಲವನ್ನು ಕೊಟ್ಟಿರುವನು ಶಿವ. ಅದನ್ನು ಶಿವ ಸರಿಪಡಿಸಿಕೊಳ್ಳಲಾರನೆ? ಎಂದರೆ ಇಂತಹ ಪ್ರಶ್ನೆ, ಅನುಮಾನಗಳಿಗೆ ಈ ಪುರಾತನರಲ್ಲಿ ಎಡೆಯಿಲ್ಲ.

ಈ ಪುರಾತನರಲ್ಲಿ ಘೋಷಣೆಯ ಪ್ರಣಾಲಿಗಳಿಗಿಂತ ಆಚರಣೆಯೇ ಮುಖ್ಯ. ಬಹುಶಃ ಘೋಷಣೆಗಳು ಇಲ್ಲವೇ ಇಲ್ಲ ಎಂದರೂ ಸಲ್ಲುತ್ತದೆ. ತನ್ನ ವೈರಿಯೇ ಆದರೂ ಆತ ಭಕ್ತವೇಷದಲ್ಲಿದ್ದರೆ ಪೂಜ್ಯ ವಂದನೀಯ. ಆದ್ದರಿಂದಲೇ 'ಶಿರುತ್ತೊಂಡರ್' ಎಂಬ ಭಕ್ತ ತನ್ನ ಮಗನನ್ನು ಕೊಂದ ವೈರಿಗೂ ಉಣಬಡಿಸಿದ. ತಮ್ಮ ಉದ್ದೇಶದ ಗುರಿಸಾಧನೆಗೆ ಹಿಂದುಮುಂದು ನೋಡದೆ ಯಾವ ಕಾರ್ಯ ಮಾಡಲೂ ಇವರುಸಿದ್ಧ. ತಂಡಿಯಡಿಗಳ ನಾಯನಾರ್ ಎಂಬಭಕ್ತ ಜೈನ ಮಠ, ಮಂದಿರಗಳನ್ನು ನಾಶಮಾಡಿ ಶಿವಮಠ, ಮಂದಿರಗಳನ್ನು ಸ್ಥಾಪಿಸಿದ. ಸರ್ವ ಜೀವದಯಾಪಾರಿಯಾದ ಶಿವ ಪರಧರ್ಮೀಯರಲ್ಲಿ ಇಲ್ಲವೆ ಎಂದು ಪ್ರಶ್ನೆ ಹಾಕಿದರೆ ಪ್ರಶ್ನೆಹಾಕಲು ಅವರಿಗೆ ವ್ಯವಧಾನವೇ ಇಲ್ಲ. ಶಿವಧರ್ಮಪ್ರಚಾರಮಾಡು, ಇದು ಅವರಿಗೆ ಒಡೆಯ (ಶಿವ) ನೇಮಿಸಿದ ಕರ್ತವ್ಯ. ಒಡೆಯನನ್ನು ಪ್ರಶ್ನಿಸುವುದು ಆಳಿಗೆ (ಭಕ್ತ) ಲಕ್ಷಣವಲ್ಲ. ತಿರುಜ್ಞಾನ ಸಂಬಂಧರ್, ತಿರುನಾವುಕ್ಕರಸರ್ ಈ ಭಕ್ತರು ಶಿವನ ಆಜ್ಞೆ ಸಲಿಸುವುದಕ್ಕೆ ಬಂದವರು. ಅದರಿಂದಲೇ ಅವರು ಜೈನರನ್ನುವಾದದಲ್ಲಿ ಸೋಲಿಸಿದ್ದು. ದೊರೆಯನ್ನು ಶಿವಧರ್ಮಕ್ಕೆ ಪರಿವರ್ತಿಸಿದ್ದು. ತಮಿಳು ಪುರಾತನರಲ್ಲಿ ಮುಖ್ಯವಾಗಿ ಕಂಡುಬರುವುದು ನಡೆ. ಇಲ್ಲಿ ನುಡಿಗೆ ಏನಿದ್ದಾರೂ ಎರಡನೆಯ ಸ್ಥಾನ. ಬಹುಶಃ ಅವರು ನುಡಿಯುವುದೇ ಇಲ್ಲವೆಂದರೂ ಸಲ್ಲುತ್ತದೆ. ಆಚರಣೆಯೇ ಮುಖ್ಯವಾದ ಶಿವಶರಣರು ಶಿವನಲ್ಲಿ ಶ್ರದ್ಧೆ, ಭಕ್ತಿ ಇಟ್ಟವರು. ಈ ಕಾರಣವಾಗಿ ಅವರು ಪ್ರಾಣತ್ಯಾಗಕ್ಕೂ ಸಿದ್ಧ. ಇವರ ಎಲ್ಲ ತತ್ವಗಳು ಶ್ರದ್ಧೆ, ಭಕ್ತಿ ಶರಣಾಗತಿಯಲ್ಲಿ ಅಡಗಿದೆ ಎಂದರೂ ಸಲ್ಲುತ್ತದೆ.

ಮಾರ್ಟಿನ್ ಲೂಥರ್ ಅನುಭಾವಿ ಮತ್ತು ದೊಡ್ಡ ವಿದ್ಯಾವಂತ. ಈತನ ತತ್ವಗಳು ವ್ಯಕ್ತ ಆದದ್ದು ನಡೆ-ನುಡಿ ಶುದ್ಧವಿಲ್ಲದ ಪಾದ್ರಿಗಳ ವಿರುದ್ಧ. ಎಂಥ ಕೆಟ್ಟಕೆಲಸ ಮಾಡಿದರೂ, (ಉದಾ. ವ್ಯಭಿಚಾರ, ಕೊಲೆ, ಸುಲಿಗೆ) ದುಡ್ಡು ತೆರೆದು ಕೊಂಡು ದೇವರಿಗೆ ಪೂಜೆಮಾಡುವುದು ಅವರಿಗೆ ಸ್ಥಾನಮಾನಗಳನ್ನು ಕಲ್ಪಿಸುವುದು ಈ ಕೆಲವುಗಳನ್ನು ಪಾದ್ರಿಗಳು ಮಾಡುತ್ತಿದ್ದರು. ಇದು ಲೂಥರನಿಗೆ ಸರಿ ಕಾಣಲಿಲ್ಲ. ಅಲ್ಲದೆ ಸ್ವತಃ ಪಾದ್ರಿಗಳೇ ಕುಡುಕರೂ, ವ್ಯಭಿಚಾರಿಗಳೂ ಆಗಿ ಧರ್ಮ ಬಾಹಿರವಾದ ನೀಚಬದುಕನ್ನು ಬದುಕುತ್ತಿದ್ದರು. ಲೂಥರ್ ಇವುಗಳನ್ನು ಪ್ರಶ್ನಿಸಿ 95 ಟೀಕೆಗಳನ್ನು ಬರೆದು ಚರ್ಚಿನಲ್ಲಿ ತೂಗು ಹಾಕಿದ. ಎಲ್ಲವನ್ನೂ

ಬಿಟ್ಟು ತ್ಯಾಗಿಗಳಾದ ಪಾದ್ರಿಗಳಿಗೆ ಭವ್ಯಬಂಗಲೆಯೇಕೆ? ವಿಲಾಸ, ಭೋಗಜೀವನ ಇವು ಯಾಕೆ? ಈ ಎಲ್ಲವುಗಳನ್ನೂ ವಿರೋಧಿಸಿ ಪರಿಶುದ್ಧ ಜೀವನಕ್ಕೆ, ಲೂಥರ್ ಆತೊರೆದ. ಅಂತೆಯೇ ತನ್ನ ಉದ್ದೇಶವನ್ನು, ದಾರಿಯನ್ನು ಇತರರಿಗೆ ತಿಳಿಸಲು ಬೈಬಲ್ ಅನುವಾದಮಾಡಿದ. ಪ್ರಾರ್ಥನಾಗೀತಗಳನ್ನು ಬರೆದ. ಹಾಡಿದ. ಮಾರ್ಟಿನ್ ಲೂಥರನ ಒಟ್ಟುತತ್ವ ಪ್ರಣಾಲಿ–ದೇವರು ಕರುಣಾಮಯ. ಆತನನ್ನು ನಿರ್ಮಲಮನಸ್ಸಿನಿಂದ ಸರಳ ಜೀವನದಲ್ಲಿ ಒಲಿಸಿಕೊಳ್ಳಬಹುದು. ಇದುಕ್ಕಾಗಿ ನಾವು ಹಂಬಲಿಸಬೇಕು. ಎಲ್ಲ ತ್ಯಾಗಕ್ಕೆ ಸಿದ್ಧರಾಗಬೇಕು.

ವಿವೇಕಾನಂದ[31] ಬುದ್ಧನ ಬಗ್ಗೆ ಹೀಗೆ ಹೇಳುತ್ತಾನೆ. "ಬುದ್ಧದೇವನ ಧರ್ಮ ಒಂದು ಮಾತ್ರ ಪ್ರಾಚೀನ ರೀತಿ ನೀತಿಗಳನ್ನು ಧ್ವಂಸಪಡಿಸತಕ್ಕದ್ದು ಆಗಿತ್ತು. ಅದಕೋಸ್ಕರವೇ ಈ ಮತ ಭರತಖಂಡದಲ್ಲಿ ನಿರ್ನಾಮವಾಗಿ ಹೋಗಿದೆ."[32] ಈ ಮಾತುಗಳ ಹಿನ್ನೆಲೆಯಲ್ಲಿ ನೋಡುವುದಾದರೆ ಬುದ್ಧ ಎಷ್ಟೊಂದು ಹೊಸದಾಗಿ ತನ್ನ ತತ್ವಗಳನ್ನು ರೂಪಿಸಿ ಆಚರಣೆಯಲ್ಲಿ ತಂದ ಎಂಬುದು ಅಧ್ಯಯನಯೋಗ್ಯವಾಗಿದೆ.

ಬುದ್ಧ ಆಂದೋಲನ ತರಲು ಹುಟ್ಟಿದವನಲ್ಲ. ಆ ಮುಂಚೆ ತಾನು ಆಂದೋಲನ ಉಂಟು ಮಾಡುವೆನೆಂಬ ನಂಬಿಕೆಯೂ ಅವನಿಗಿರಲಿಲ್ಲ. ಬುದ್ಧ ಆಂದೋಲನ ತಂದದ್ದು ಕೇವಲ ಆಕಸ್ಮಿಕವಾದುದು. ಈತ ಬುದ್ಧನಾದ ಮೇಲೆ ತನ್ನ ತತ್ವಗಳನ್ನು ಕೆಲವೇ ಆಚರಣೆಗಳಲ್ಲಿ, ಮಾತುಗಳಲ್ಲಿ ಸಂವಹನ ಮಾಡುತ್ತಾ ಹೋದ. ಈತ ಆಚರಣೆಗೆ ತಂದ ತತ್ವಗಳು ಒಂದು ರೀತಿಯಲ್ಲಿ ಮಾರ್ಕ್ಸ್‌ನ ತತ್ವಗಳಂತೆ ಒಮ್ಮೆಲೆ ರೂಪಿತ ಆದವುಗಳು. ವಚನಕಾರರಂತೆ, ತತ್ವಗಳಲ್ಲ ಅವು. ಅವನ ಒಟ್ಟು ತತ್ವವನ್ನು ಸಾರರೂಪವಾಗಿ ಹೀಗೆ ಹೇಳಬಹುದು.[33]

---

31. ವಿವೇಕಾನಂದ ಬುದ್ಧನ ಬಗ್ಗೆ ವ್ಯಕ್ತಪಡಿಸಿರುವ ಈ ಮಾತುಗಳಿಂದ ಆತ ಪರಂಪರೆಯನ್ನು ಎತ್ತಿಹಿಡಿಯುವ ಸಂಪ್ರದಾಯವಾದಿ ಎಂಬುದು ಸ್ಪಷ್ಟವಾಗುತ್ತದೆ. ಸ್ವತಂತ್ರ ಆಲೋಚನೆಯನ್ನು, ಬೇರೊಂದು ತತ್ವ ಧರ್ಮ ಉಗಮ ಆಗುವುದನ್ನು ಆತ ಲೇಶವೂ ಸಹಿಸಲಾರ. ಇಂತಹ ಧರ್ಮ ಭಾರತದಲ್ಲಿ ಇಲ್ಲವಾದ್ದು ಲೇಸೇ ಎಂಬ ಧೋರಣೆ ವ್ಯಕ್ತಪಡಿಸಿದ್ದಾನೆ. ಇಂತಹ ಸಂಪ್ರದಾಯವಾದಿಯನ್ನು ಪ್ರಗತಿಪರ ಚಿಂತಕ, ಕ್ರಾಂತಿಕಾರಿ ಎನ್ನುವುದು ಸಾಧ್ಯವೆ ?
32. ವಿವೇಕಾನಂದ: ಸಂವಾದ ತರಂಗಿಣಿ, ಪುಟ 27.
33. ಧರ್ಮಾನಂದ ಕೋಸಂಬಿ: ಭಗವಾನ್ ಬುದ್ಧ, ಪುಟ 163.

1. ಮನುಷ್ಯ ಹುಟ್ಟು, ಸಾವು, ರೋಗ, ಮುಪ್ಪಿನಿಂದ ಬಂಧಿತನಾಗಿದ್ದಾನೆ. ಅವನಿಗೆ ಆ ಪ್ರಿಯರ ಸಮಾಗವು ಪ್ರಿಯರ ವಿಯೋಗ ದುಃಖಕರವಾಗಿದೆ.

2. ಈತ ಹುಟ್ಟುವ ಮತ್ತು ವಿಷಯವಾಸನೆಗಳಲ್ಲಿ ಮಗ್ನವಾಗುವ ತೃಷೆಯಿಂದ ಕೂಡಿದ್ದಾನೆ. ಇದು ನಾಶದಿಂದ ಕೂಡಿದೆ. ಇದರಿಂದ ಜಗತ್ತು ದುಃಖ ಸಮುದಾಯದಿಂದ ಕೂಡಿದೆ.

ಇವುಗಳನ್ನು ಗೆಲ್ಲಲು ಬುದ್ಧ ಈ ಮಾರ್ಗಗಳನ್ನು ಸೂಚಿಸಿದ್ದಾನೆ.

1. ದುಃಖವನ್ನು ವೈರಾಗ್ಯದಿಂದ ನಿರೋಧಿಸಬೇಕು. ಅಂದರೆ ವಿಷಯವನ್ನು ಪೂರ್ಣವಾಗಿ ನಿರಾಕರಿಸುವುದು.

2. ದುಃಖ ಸಮುದಾಯವನ್ನು ಗೆಲ್ಲಲು ಅಷ್ಟಾಂಗಿಕ ಮಾರ್ಗವನ್ನು ಅನುಸರಿಸುವುದು. ಆ ಮೂಲಕ ಮುಕ್ತಿಯನ್ನು ಪಡೆಯುವುದು. ಅಂದರೆ ದೇಹವನ್ನು ಬಿಡುವುದು. ಭವವನ್ನು ಗೆಲ್ಲುವುದು,

ಅಷ್ಟಾಂಗಿಕ ಹಾದಿಗಳು ಇವು. ಸಮ್ಯಕ್‌ದೃಷ್ಟಿ, ಸಮ್ಯಕ್‌ಸಂಕಲ್ಪ, ಸಮ್ಯಕ್‌ವಚನ, ಸಮ್ಯಕ್ ಕರ್ಮಾಂತ, ಸಮ್ಯಕ್‌ಆಜೀವ, ಸಮ್ಯಕ್ ವ್ಯಾಯಾಮ, ಸಮ್ಯಕ್ ಸ್ಮೃತಿ, ಸಮ್ಯಕ್ ಸಮಾಧಿ.

ಬುದ್ಧ ಈತತ್ವಗಳನ್ನು ವಿವರ ವಿವರವಾಗಿ ಆಜೀವ ಪರ್ಯಂತ ಭೋಧನೆ ಮಾಡುತ್ತಾಹೋದ. ಹೇಳುವುದನ್ನು ಖಚಿತವಾಗಿ ಹೇಳಲು ದೃಷ್ಟಾಂತ, ಉಪಮೆ ಇತ್ಯಾದಿಗಳನ್ನು ಬಳಸಿದ. ಯಶಸ್ವಿಯಾದ ಬರ್ಮ, ಚೀನ, ಸಿಲೋನ್, ಟಿಬೆಟ್, ಭಾರತ ಇತ್ಯಾದಿ ಹಲವಾರು ದೇಶಗಳಲ್ಲಿ ಬುದ್ಧನ ತತ್ವಗಳು ಪಳಯುಳಿಕೆಗಳಾಗಿ ಈಗಲೂ ಬದುಕಿವೆ.

ವಚನಕಾರರ ಆಚರಣೆಯ ಪ್ರಣಾಲಿಗಳು ಒಮ್ಮೆಗೆ ರೂಪಧಾರಣೆಪಡೆದವುಗಳಲ್ಲ. 180 ಕ್ಕೂ ಹೆಚ್ಚು ವಚನಕಾರರು ಒಬ್ಬೊಬ್ಬರೂ ಆಚರಣೆಯನ್ನು ಹೇಳುತ್ತಾರೆ. ಆಚರಣೆ ಮುಖ್ಯ ಅನ್ನುತ್ತಾರೆ. ಅವುಗಳನ್ನು ವಿಮರ್ಶಿಸುತ್ತಾರೆ. ನಂತರ ಒಪ್ಪಿ ಅದರಂತೆ ನಡೆಯುತ್ತಾರೆ. ಅವರಿಗೆ ತಮಿಳುಪುರಾತನರ ಪ್ರೇರಣೆ ಬಹಳವಾಗಿಆಗಿದೆ.

"ಶಿವನೇ ದೈವ. ಶಿವಭಕ್ತನೇ ಕುಲಜ ; ಶಿವನಲ್ಲದನ್ಯ ದೈವಲುಂಟೆಂಬ

ನಕೆನ್ನೆವಾರಸೀಳಿದಲ್ಲದೆ ಎನ್ನಮುನಿಸು ಹೋಗದಯ್ಯ. ಸ್ವಾಮಿ ನೀನು ಶಾಶ್ವತ ...ಮಹಾದೇವ ಮಹಾದೇವ. ಇಲ್ಲಿಂದ ಮೇಲೆ ಶಬ್ದವಿಲ್ಲ" ಈ ಪರಮಾತ್ಮ ಶಿಲೆಯ ಮರೆಯ ಹೇಮದಂತೆ ಇದ್ದಾನೆ. ಭಾವದ ಮರೆಯ ಬ್ರಹ್ಮದಂತೆ ಅಡಗಿದ್ದಾನೆ. ಈತ ಜಗದ ಯಂತ್ರವಾಹಕ. ಸಾಕು ಸಾಕೆಂಬನ್ನಕ್ಕ ಜಗದ ಗಾಲಿ ಉರುಳುತ್ತದೆ. ಇಲ್ಲಿ ಅವನ ಭಕ್ತರು ಆತ ಆಡಿಸಿದಂತೆ ಆಡುತ್ತಾರೆ. ಕೋಲತುದಿಯ ಕೋಡಗನಂತೆ, ನೇಣತುದಿಯ ಬೊಂಬೆಯಂತೆ. ಹೀಗಾಡಿ ಎವ ಪರಮಾತ್ಮ ಎತ್ತೆತ್ತ ನೋಡಿದರತ್ತತ್ತ ನೀನೆ. ಇಂತಹ ಪರಮಾತ್ಮ ಚುಳುಕಾಗಿ ಬಂದು ಕರಸ್ಥಲದಲ್ಲಿ ಆರಾಧಿಸಿಕೊಳ್ಳುತ್ತಾನೆ.

ಅತ್ತು ಕರೆವನೋವ ಹಾಡಿ ಕಳೆವ ಭಕ್ತರಿಗೆ ಸರ್ವಭರಿತನಾಗಿ ಮುಖ ದೋರುತ್ತಾನೆ. ಅನುಭಾವಿಯುದ ಭಕ್ತ ಅರಿಸಿನವನೆ ಮಿಂದು ಹೊಂದೊಡಿ ಗೆಯನೆತೊಟ್ಟು ಪುರುಷನ ಬರವಿಗೆ ದಾರಿನೋಡುವ ಸತಿಯಂತೆ ದೇವರತ ಹಾದಿನೋಡುತ್ತಾನೆ. ಇಂತಹ ಭಕ್ತನಿಗೆ ಶತಕೋಟಿ ಸೂರ್ಯರು ಮೂಡಿದಂತೆ ಇದ್ದ ತೇಜಃ ಪ್ರಕಾಶದ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ. ಇದಾಗುವ ವರೆಗೆ ಭಕ್ತ ತರಗೆಲೆ ಗಿರಕೆಂದಡೆ ದಾರಿಯನೋಡುತ್ತ ಬಾಯಾರುತ್ತಾನೆ.

ನಡೆಮುಖ್ಯವಾದ ಭಕ್ತನಿಗೆ ಕಾಯಕವೂ ಮುಖ್ಯ. ಚಿತ್ತ ಶುದ್ಧವಾದ ವರಿಗೆ ದ್ರವ್ಯದ ಬಡತನವಿಲ್ಲ. ಮನೆ ಬಡವಾದರೇನು ಮನ ಘನವಾಗಿರುವಾಗ ಸಂಗ್ರಹ ಮಾಡುವುದು ಸಲ್ಲ. ವ್ಯವಹಾರ ಮಾಡುವುದು. ಪರಸೇವೆಯ ಮಾಡು ವುದು, ಆರಂಭವಮಾಡುವುದು ಗುರು, ಲಿಂಗ, ಜಂಗಮದ ಪ್ರೀತ್ಯರ್ಥವಾಗಿ. ಶರಣ ಮನೆಗೆ ಬಂದರೆ ಭಕ್ತ ಗುಡಿತೋರಣವ ಕಟ್ಟುತ್ತಾನೆ. ಶರಣರು ಬಂದರೆ ಸಾಸಿವೆಯ ಮೇಲೆ ಸಾಗರ ಹರಿದಂತೆ. ಶರಣರು ಮುನಿದು ಹೋದರೆ ಭಕ್ತನಿಗೆ ಹರಣದಹೋಗು. ಭಕ್ತ ಬೇರೆ ಅಲ್ಲ. ದೇವರು ಬೇರೆ ಅಲ್ಲ. ದೇವ ಭಕ್ತ ರೂಪಾಗಿ ಹಾಕೊಂದೆ ಸಹನ್ಸೊಂದೆಸೆಯಾಗಿ ಕಾಡುತ್ತಾನೆ. ತರಕಟ ಕಾಡುವ ದೇವ ಒಲಿಯುವುದು ಕಷ್ಟ. ಭಕ್ತಿಮಾಡುವುದು ಗರಗಸದೊಂದಿಗಿನ ಸರಸ. ಇಲ್ಲಿ ಲಿಂಗ ಮೆಚ್ಚಬೇಕು. ಜಂಗಮ ಮೆಚ್ಚಬೇಕು. ಪ್ರಸಾದ ಮೆಚ್ಚಿ ತನ್ನಲ್ಲಿ ಸ್ವಾಯತವಾಗಿರಬೇಕು.

ಲೋಕದ ಮಾನವ ಶಿವದೀಕ್ಷೆ ತೆಗೆದುಕೊಂಡು ಶರಣನಾದಮೇಲೆ ಕುಲವಿಲ್ಲ. ನೆಲವೊಂದೆ ಹೊಲಗೇರಿ. ಕುಲವೊಂದೇ ತನ್ನ ಅರಿದವಂಗೆ. ನೀರು ಶೌಚಾಚಮನಕ್ಕೆ ಒಂದೇ ಆದಂತೆ ಷಡುದರುಶನ ಮುಕ್ತಿಗೆ ಫಲ ಒಂದೇ. ಇಂತಹ ಭಕ್ತ ಶರಣರ ತೊತ್ತಿನಮಗು ಜಂಗಮಕ್ಕೆ ಏನುಬೇಕಾದರೂ ಕೊಡಲುಸಿದ್ಧ. ಗಂಡಹೆಂಡತಿ ಒಂದೇ ದೇವರ ಭಕ್ತರು. ಅದು ಶಿವನಿಗೆ ಹಿತ. ಇವರು ಶರಣರಿಗೆ ಅಗ್ಘವಣಿ ನೀಡುವುದು, ಪತ್ರಿ ಕೊಡುವುದು ತನ್ನನರ್ಪಿಸುವುದರಲ್ಲಿ ಹಿಗ್ಗುತ್ತಾರೆ. ಇಂತಹ ದಂಪತಿಗಳಿಗೆ ಕರ್ತವ್ಯ ಮುಖ್ಯ. ದೇವರು ಕೂಡ ಹಗು ಹೊಸೆದು ತನ್ನ ಊಟ ತಾನು ಸಂಪಾದಿಸಬೇಕು. ಮೊದಲು ಜಂಗಮರಿಗರ್ಪಿಸಿ ನಂತರ ತಾನು ಸೇವಿಸಬೇಕು. ಇಂತಹ ಭಕ್ತ ಭಕ್ತರು ಬಂದಾಗ ಮಂಚವನೇರುವುದಿಲ್ಲ. ಇವರು ಹೊರಗೆ ಶಿವಾಲಯ ಕಟ್ಟದೆ ಒಳಗೆ ಶಿವಾಲಯ ಕಟ್ಟುತ್ತಾರೆ. ಕಾಲೇ ಕಂಭಗಳಾದವೆನ್ನ. ದೇಹವೇ ದೇಗುಲವಾಯಿತ್ತಯ್ಯ ಎನ್ನುತ್ತಾನೆ ಅಲ್ಲಮ. ಭಕ್ತ ಹೀಗಾಗದಿದ್ದರೆ ಆತ ಮಳೆ ಅವನ ಅಂಗೈಯಲಿಂಗ ಕಲ್ಲು.

ಇವರ ಆಚರಣೆಯ ತತ್ವಗಳನ್ನು ಸಾರಸಂಗ್ರಾಹವಾಗಿ ಹೀಗೆ ಹೇಳಬಹುದು.

1. ಮರ್ತ್ಯ ಕರ್ತಾರನ ಕಮ್ಮಟ. ಶರಣ ಇಲ್ಲಿಸಲ್ಲುವ ನಾಣ್ಯ. ದೇವಸಾಕಾರವೂ ಹೌದು. ನಿರಾಕಾರವೂ ಹೌದು. ಆತ ಶಿವ.

2. ಭಕ್ತ ಅವನಿಗಾಗಿ ಅರಸಿ ಅರಸಿ ಬೆದ ಬೆದ ಬೆಂದಾಗ ಶಿವ ಸಾಕ್ಷಾತ್ಕಾರ ಆಗುತ್ತದೆ.

3. ಈ ಸಾಕ್ಷಾತ್ಕಾರಕ್ಕೆ ದಾರಿ ಷಟ್ಸ್ಥಲಗಳು. ಇವು ಸಾಧನಾಮಾರ್ಗ. ಈ ದಿಸೆಯಲ್ಲಿ ಶಿವಶರಣ ಶಿವನಿಗೆಸಮಾನ.

4. ಭಕ್ತ ಶಿವನಿಗೆ ಎಲ್ಲವನ್ನು ತ್ಯಾಗಮಾಡಲು ಸಿದ್ಧ. ಓಂ ನಮಃಶಿವಾಯ ಸರ್ವಜನವಶ್ಯ. ಜಾತಿ, ಕುಲವಿಲ್ಲ ಶರಣನಿಗೆ. ಅಂತೆಯೇ ಯಾರು ಬೇಕಾದರೂ ಶಿವನ ಭಕ್ತನಾಗಬಹುದು. ಅಷ್ಟಾವರಣಗಳ ಅಳವಳಿಕೆಯಿಂದ ಆತ ಭಕ್ತನಾಗುತ್ತಾನೆ.

5. ಪ್ರತಿಯೊಬ್ಬ ಭಕ್ತನೂ ತನ್ನ ಆಚರಣೆಯ ಮೂಲಕ ಧರ್ಮ ಪ್ರಚಾರ

ಮಾಡಬೇಕು. ಕಾಯಕವಿಲ್ಲದೆ ಬದುಕಬಾರದು. ಪಂಚಾಚಾರಗಳು ಭಕ್ತನಾದವನಿಗೆ ಮುಖ್ಯ.

ಈ ಎಲ್ಲ ತತ್ವಸಾರ ಶರಣನಿಗೆ ಮಾತ್ರ ಅಲ್ಲ. ಎಲ್ಲ ಮಾನವರಿಗೂ ಅನ್ವಯಿಸುವಂತೆ ಬಸವಣ್ಣನ ಈ ಒಂದು ವಚನದಲ್ಲಿದೆ.

ಕಳಬೇಡ, ಕೊಲಬೇಡ, ಹುಸಿಯ ನುಡಿಯಲು ಬೇಡ,
ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ,
ತನ್ನ ಬಣ್ಣಿಸಬೇಡ, ಇದಿರ ಹಳಿಯಲು ಬೇಡ,
ಇದೇ ಅಂತರಂಗ ಶುದ್ಧಿ, ಇದೇ ಬಹಿರಂಗಶುದ್ಧಿ
ಇದೇ ನಮ್ಮ ಕೂಡಲಸಂಗಮದೇವರನೊಲಿಸುವ ಪರಿ.[35]

## ಹೊಸ ವ್ಯವಸ್ಥೆಯ ಆಂದೋಲನದ ಪ್ರಣಾಲಿಗಳು

ಬುದ್ಧನನ್ನು ಬಿಟ್ಟು ಉಳಿದೆಲ್ಲ ಆಂದೋಲನಕಾರರ ತತ್ವಗಳು ಹಲವರಿಂದ ಸೇರಿ ಆದದ್ದು. ಇವುಗಳು ನಂತರ ಪರಿಷ್ಕರಣಗೊಂಡು ಸೇರಿದವುಗಳು ಕೂಡ. ಬುದ್ಧನ ತತ್ವಗಳು ಮೊದಲವ್ಯವಸ್ಥೆಯ ತತ್ವಗಳನ್ನು ಧರ್ಮವನ್ನು ನಿರಾಕರಿಸಿ ಆದವುಗಳು. ಇವು ಮತ್ತೆ ಮತ್ತೆ ಸೇರ್ಪಡೆ ಆಗಲಿಲ್ಲ. ಈ ದೃಷ್ಟಿಯಿಂದ ಬುದ್ಧ ಮಾರ್ಕ್ಸ್‌ನನ್ನು ಹೋಲುತ್ತಾನೆ. ಕಾರ್ಲ್‌ಮಾರ್ಕ್ಸ್ ತನ್ನ ಸಿದ್ಧಾಂತವನ್ನು ಒಮ್ಮೆಯೇ ಪುಸ್ತಕ ರೂಪದಲ್ಲಿ ಬರೆದು ಮುಗಿಸಿದ. ಈ ತತ್ವ ಪ್ರಣಾಲಿಗಳು ಅವನ ಕಾಲದಲ್ಲಿ ಯಶಸ್ವಿಯಾಗಿ ಪ್ರಯೋಗವಾಗಲಿಲ್ಲ. ಉಳಿದೆಲ್ಲ ಆಂದೋಲನಕಾರರು ಮಾರ್ಕ್ಸ್‌ನಿಗಿಂತ ಈ ದೃಷ್ಟಿಯಿಂದ ಭಿನ್ನ. ಇದಕ್ಕೆ ಮಾರ್ಕ್ಸ್ ಕೂಡ ಹೊಣೆಅಲ್ಲ. ಇವನ ಸಿದ್ಧಾಂತ ವೈಜ್ಞಾನಿಕ ಸಮಾಜವಾದ ಅಥವಾ ಕಮ್ಯುನಿಸಂ. ಇದು ನಂತರ ಲೆನಿನ್‌ನಿಂದ ಯಶಸ್ವಿಯಾಗಿ ಪ್ರಯೋಗವಾಯಿತು ನಿಜ. ಅಷ್ಟೇ ಅಲ್ಲದೆ ಆವರೆಗೆ ಪ್ರಪಂಚದ ಚರಿತ್ರೆಯಲ್ಲಿ ಆಗದ ದೊಡ್ಡ ಕ್ರಾಂತಿಯನ್ನು ಮಾರ್ಕ್ಸ್‌ನ ತತ್ವಪ್ರಣಾಲಿಗಳು ತಂದವು.

---

35. ಬಸವಣ್ಣನವರ ವಚನಗಳು, 235.

ಉಳಿದೆಲ್ಲ ಆಂದೋಲನಕಾರರು ತತ್ವಕೊಟ್ಟದ್ದು ಆಚರಣೆಗೆ ತಂದದ್ದು ಧರ್ಮಮಾರ್ಗದಲ್ಲಿ. ಇವರಿಗೆ ಸಮಾಜದಲ್ಲಿ ಬೆಳವಣಿಗೆ ಆಗುವುದು ಸುಧಾರಣೆ ತರುವುದು ಆನುಷಂಗಿಕ. ಇವರ ಗುರಿ ದೇವರು ಅಥವಾ ಪರಮಸತ್ಯ. ಪರಮ ಸತ್ಯದ ದಿಸೆಯಲ್ಲಿ ಹೋಗುವವನು ಅನ್ಯರಿಗೆ ಕೆಡಕುಮಾಡಬಾರದು. ಯಾಕೆಂದರೆ ಹಾಗೆ ಮಾಡಿದರೆ ದೇವನಿಗೆ ಅದು ಇಷ್ಟವಿಲ್ಲ. ಇದರಿಂದಾಗಿ ಸಮಾಜದ ದೋಷಗಳನ್ನು ಎದ್ದು ಕಂಡಾಗ ಇವರು ತಿದ್ದಿದರು. ಮಾರ್ಕ್ಸ್ ಹಾಗೆ ಮಾಡಲಿಲ್ಲ. ಇವನ ದಾರಿಯೇ ಬೇರೆ. ಈತನಿಗೆ ದೇವರು ಶೋಷಣೆಯ ದಾರಿ. ಆತ ಮುಖ್ಯವಲ್ಲ ಮಾತ್ರವಲ್ಲ ದೇವರು ಇಲ್ಲ. ದೇವರು ಜನರನ್ನು ದಾರಿ ತಪ್ಪಿಸುವ ಅಫೀಮು. ಈತ ಸಮಾಜವನ್ನು ಚಿಕಿತ್ಸೆಮಾಡಲು ಹೊರಟವ. ಕಾರ್ಲ್ ಮಾರ್ಕ್ಸ್ ಒಬ್ಬ ಡಾಕ್ಟರನಂತೆ ಕಾರ್ಯ ನಿರ್ವಹಿಸಿದ. ರೋಗಿಯನ್ನು ಪೂರ್ಣವಾಗಿ ಪರೀಕ್ಷೆಗೆ ಗುರಿಪಡಿಸಿ ರೋಗ ಯಾವುದೆಂಬುದನ್ನು ರೋಗತಜ್ಞನಾಗಿ ಕಂಡುಹಿಡಿದ. ರೋಗ ಕಂಡುಹಿಡಿದು ಅದಕ್ಕೆ ತಕ್ಕ ಔಷಧವನ್ನು ಆತ ಬರೆದು ಕೊಟ್ಟ. ಇಲ್ಲೆಲ್ಲ ವಾಸ್ತವ ಪರಿಶೀಲನೆಯಿದೆ. ಮಾರ್ಕ್ಸ್‌ನ ಚಾರಿತ್ರಿಕ ಪರಿಶೀಲನೆಯೇ ರಷಿಯದ ಆಂದೋಲನಕ್ಕೆ ಮೂಲಪ್ರೇರಣೆ. ಅದನ್ನ ಹೀಗೆ ಸಂಗ್ರಹಿಸಬಹುದು.

"The history of all hitherto existing society is the history of class struggles.

Freeman and slave, patrican and plebian, lord and serf, guild master and journeyman, in a world, oppreser and oppresed stood in constant-ant oposition to one another, carried on an un interrupted, now hidden, now open fight, a fight that each time ended either in a revolutionary reconstitution of society at large or in the common ruin of the contending class" [36]

36. Marx : Manifesto of the communist party, Page 419

ಮಾರ್ಕ್ಸ್‌ನ ಈ ಅಧ್ಯಯನ ಆಡಂಸ್ಮಿತ್ ಮತ್ತು ಡೇವಿಡ್ ರಿಕಾರ್ಡೋ ಅವರು ಮಾಡಿದಅಧ್ಯಯನದಿಂದ ಪ್ರೇರಿತವಾದುದು. ಮಾರ್ಕ್ಸ್‌ನ 'ಕ್ಯಾಪಿಟಲ್' ಕೃತಿ ಬಂಡವಾಳಷಾಹಿ ಪದ್ಧತಿಯ ಆರ್ಥಿಕ ಸ್ಥಿತಿಯನ್ನು ಅಧ್ಯಯನ ಮಾಡುತ್ತದೆ. ಈ ಅಧ್ಯಯನವನ್ನು ಮುಂದುವರಿಸಿದ ಮಾರ್ಕ್ಸ್ ಕ್ರಾಂತಿ, ಚರಿತ್ರೆಯ ಅನಿವಾರ್ಯ ಸ್ಫೋಟನೆಯೆಂದು ಭವಿಷ್ಯ ನುಡಿದ.

"According to marx there will come the great communist revolution. The communist will take control of Society on behalf of proletariat, private property will be abolished, and every one will belong to the same class. Then each man will produce as best as he can and will re-receive as much as needs. There will be no more need for the government to protect private property and the state will wither away. This revolution will be world wide, starting in the most advanced industrial country (England) and spreading accross Europe. It will put an end to wars, which Marx believed to merely capitalist attempts to extend private property and health."[37]

ಚರಿತ್ರೆಯ ಈ ಅವಲೋಕನ ಮತ್ತು ಅದರಿಂದ ಪ್ರೇರಿತವಾದ ಮೇಲಿನ ವಾಕ್ಯಗಳು ವೈಜ್ಞಾನಿಕ ಚಿಂತನೆಯಲ್ಲಿ ಮಹತ್ವದ ಸಾಧನೆಗಳಾಗಿವೆ. ಮುಂದುವರಿದ ಮಾರ್ಕ್ಸ್ ಸಂಘಟನೆಗೆ ತೊಡಗಿದ. "ಪ್ರಪಂಚದ ಕಾರ್ಮಿಕರೇ ಒಗ್ಗಟ್ಟಾಗಿರಿ. ನಿಮ್ಮ ಸಂಕೋಲೆಗಳ ಹೊರತು ನೀವು ಕಳೆದು ಕೊಳ್ಳುವುದು

37. Great events in World History: See Marx and the First International, P. 216

ಬೇರೇನೂ ಇಲ್ಲ. ಪ್ರಪಂಚವೇ ನಿಮ್ಮದಾಗಬೇಕಿದೆ."[38] ಎಂದು ಘೋಷಿಸಿದ. ಶ್ರೀಮಂತರು ಬಲಪ್ರಯೋಗವಿಲ್ಲವೆ ಅವರು ಆಸ್ತಿ ಬಿಟ್ಟುಕೊಡರು. ಅವರ ಮೇಲೆ ನಾವು ಧಾಳಿ ಮಾಡದ ಹೊರತು ನಮಗೆ ನ್ಯಾಯ ದೊರೆಯುವುದಿಲ್ಲ. ಕೃಷಿ, ಕೈಗಾರಿಕೆ, ಬ್ಯಾಂಕ್, ರೈಲ್ವೆ ಇತ್ಯಾದಿಗಳ ಉತ್ಪಾದನೆ ಬಂಡವಾಳ ಷಾಹಿಯ ಕೈಸೇರುವುದನ್ನು ತಪ್ಪಿಸಬೇಕಿದೆ. ಸಂಸ್ಥೆಗಳು ಮತ್ತು ಕಾರ್ಮಿಕರನ್ನು ಬಂಡವಾಳಗಾರ ತನ್ನ ಹಿತಾಶಕ್ತಿಗಾಗಿ ದುಡಿಸಿಕೊಳ್ಳುವುದನ್ನು ಕೊನೆಗೊಳಿಸ ಬೇಕಾಗಿದೆ. ಬಂಡವಾಳಗಾರ ದಡೂತಿ ಬಂಡವಾಳಗಾರನಾಗುವುದನ್ನು ತಪ್ಪಿಸಿ ಎಲ್ಲ ಸ್ವತ್ತುಗಳು ಪ್ರಜೆಗಳ ಹಿಡಿತದಲ್ಲಿ ಭದ್ರವಾಗಬೇಕಿದೆ. ಈ ಎಲ್ಲ ವಿಜಯವು ಕುಳಿತು ಕನಸು ಕಾಣುವುದರಿಂದ, ಒಣ ಮಾತುತಳ ಹರಟೆಯಿಂದ ದೊರೆಯು ವುದಿಲ್ಲ. ಕ್ರಾಂತಿಕಾರಕ ಆಂದೋಲನದಲ್ಲಿ ದೇಶದ ಎಲ್ಲ ಕಾರ್ಮಿಕರು ಸಮಗ್ರ ವಾಗಿ ದುಮುಕಬೇಕು.

ಮಾರ್ಕ್ಸ್‌ನ ಈ ಹೋರಾಟ ಲೆನಿನ್ ಕಾಲದಲ್ಲಿ ಯಶಸ್ವಿಯಾಯಿತು. ಕಾರ್ಮಿಕರು ಒಗ್ಗಟ್ಟಾದರು. ಲೆನಿನ್ ಮುಂದಾಳು ಆಗಿ ಎಲ್ಲ ತತ್ವ ಪ್ರಣಾಲಿ ಗಳನ್ನು ಮಂಡಿಸಿದ.

i) Democratic Republic
ii) Confiscation of the landed estates
iii) Eight hour day for the workers.

ಲೆನಿನ್ ಹೀಗೆ ಮೂರು ಮುಖ್ಯ ಈಡೇರಿಕೆಗಳನ್ನು ಮುಂದಿಟ್ಟು ಕ್ರಾಂತಿಗೆ ಪ್ರೇರೇಪಣೆ ನೀಡಿದ. ನಮಗೆ ಎಂದೆಂದಿಗೂ ಮಾರ್ಕ್ಸ್‌ರೇ ಮಾದರಿ. ಅವರೇ ನಮ್ಮ ನೇತಾರರು. ವರ್ಗವ್ಯವಸ್ಥೆಯ ಸಮಾಜದಲ್ಲಿ ನ್ಯಾಯಸಮ್ಮತವಾದ ಸಮಾನತೆ ಇಲ್ಲ. ಇದು ಕಾರ್ಮಿಕರ ಗುಲಾಮಗಿರಿಯನ್ನು ಎತ್ತಿಹಿಡಿಯು ತ್ತದೆ. ಮಾರ್ಕ್ಸ್‌ವಾದವು ಗುಲಾಮತನವನ್ನು ಎಲ್ಲ ರೀತಿಯಿಂದ ಪ್ರತಿಭಟಿಸು ತ್ತದೆ.[39]

ಝಾರ್ ಪ್ರಭುತ್ವ ಶೋಷಣೆಯನ್ನು ಸಮರ್ಥಿಸುತ್ತದೆ. ಇದು ನಿರ್ನಾಮ

38. Workers of the world unite. You have nothing to loose but your claint and have a world to win.
39. Lenin collected works Vol. 19, Page 23-28

ವಾಗಲೇಬೇಕು. ಸಮಾನತೆಯ ತತ್ವ ಸಾರುವ ವೈಜ್ಞಾನಿಕ ಸಮಾಜವಾದ ಬೆಳಗ ಬೇಕಾಗಿದೆ. ಕಾರ್ಮಿಕನ ದುಡಿಮೆಯಿಂದ ಉಂಟಾದ ಉತ್ಪಾದನೆ ಅವನನ್ನೇ ಶೋಷಿಸುತ್ತಿದೆ. ಬಂಡವಾಳ, ಕಾರ್ಮಿಕರ ಅವಲಂಬನೆ ಉಳ್ಳದಾಗಿದೆ. ಆದರೆ ಅದು ಅವನನ್ನು ತುಳಿಯುತ್ತಿದೆ. ಕೈಗಾರಿಕೆ ಕಾರಣವಾಗಿ ಒಂದಾದ ಕಾರ್ಮಿ ಕರು ಏಕಸ್ವಾಮ್ಯವನ್ನು ಕಿತ್ತೊಗೆಯುಬೇಕು. ಶ್ರಮಿಕವರ್ಗದ ಅಧಿಕಾರ ಏರ್ಪಡ ಬೇಕಾಗಿದೆ. ಅದರಿಂದ ಎಲ್ಲ ಕಾರ್ಮಿಕರ ಕ್ರಾಂತಿಯಲೆಗಳು ಮೇಲೇಳಲಿ. ಕೆರಳಿ ಕೆರಳಿ ಬಂಡವಾಳಪದ್ಧತಿಯನ್ನು ಚಚ್ಚಿಹಾಕಲಿ. ದುಡಿಯುವವನನೇ ಅಧಿಕಾರ. ದುಡಿಯುವವನದೇ ವಿಜಯ.[40]

ರಷಿಯನ್ನರ 1917ರ ಆಂದೋಲನದ ಗುರಿ ಕಾರ್ಮಿಕರ ವಿಜಯಸಾಧಿಸು ವುದು. ಇಲ್ಲಿ ರಕ್ತಪಾತ ಖಚಿತ. ಇದಕ್ಕಾಗಿ ಅಖಂಡ ಹೋರಾಟ ಅತ್ಯಗತ್ಯ. ಬಂಡವಾಷಾಹಿ ಪದ್ಧತಿ ಪ್ರಭುತ್ವದ ಪತನ. ಆ ಮೂಲಕ ರಷಿಯದ ಪ್ರಜೆಗಳ ವಿಜಯ. ಇದಕ್ಕಾಗಿ ರಷ್ಯ ವ್ಯಾಪಿಯಾಗಿ ರಾಷ್ಟ್ರೀಯತೆಯ ಭಾವನೆಯಿಂದ ಕಾರ್ಮಿಕರೆಲ್ಲರು ಒಗ್ಗಟ್ಟಾದರು ವಿಜಯಸಾಧ್ಧಿಸಿದರು.

## ಆಂದೋಲನವೇ ? ಸಮಾಜದ ಸುಧಾರಣೆಯೆ ?

ಹಿಂದಿನ ಅಧ್ಯಾಯದಲ್ಲಿ ಆಂದೋಲನ ಯಾವುದೆಂದು ನಿರ್ದೇಶಿಸಿದ್ದಾ ಯಿತು. ಯಾವುದೇ ಒಂದು ಕ್ಷೇತ್ರದಲ್ಲಿ ಉಂಟಾದ ಚಳುವಳಿ ಮತ್ತೊಂದು ಕ್ಷೇತ್ರದಮೇಲೂ ಪ್ರಭಾವ ಬೀರಿ ಅದರ ವ್ಯಾಪ್ತಿ ಮತ್ತು ಪ್ರಭಾವಗಳು ವಿಸ್ತರಿ ಸಿದುದು ಆಂದೋಲನ ಎಂದು ಹೇಳಿಯಾಯಿತು. ಇದನ್ನು ಇಲ್ಲಿ ವಚನಕಾರರ ಸಂದರ್ಭದಲ್ಲಿ ತೀವ್ರ ಪರಿಶೀಲನೆಗೆ ಗುರಿಪಡಿಸಿ ಅದು ಆಂದೋಲನವೇ ಅಥವಾ ಚಳುವಳಿಯೇ ಎಂಬುದನ್ನು ವಿಸ್ತರಿಸಿ ಚರ್ಚಿಸಲಾಗುವುದು. ಇದಕ್ಕೆ ಮುನ್ನ ವಚನ ಸಾಹಿತ್ಯದ ಬಗ್ಗೆ ಈವರೆಗೆ ನಡೆದಿರುವ ಚರ್ಚೆಯನ್ನು ಪರಿಶೀಲಿಸ ಬಹುದು.

ವಚನ ಸಾಹಿತ್ಯದ ಬಗ್ಗೆ ಮುಖ್ಯ ನಾಲ್ಕು ರೀತಿಯ ಆಲೋಚನೆಗಳು ಹೊರಬಿದ್ದಿವೆ. ಅದರ ಸಂಗ್ರಹ ಹೀಗಿದೆ.

1. ವಚನಸಾಹಿತ್ಯ ವಿಶ್ವದ ಶ್ರೇಷ್ಠ ಕೊಡುಗೆ. ಅವರ ಕ್ರಾಂತಿ ಪ್ರಪಂಚದ

---

40. Lenin collected works Vol· 29, Page 409-434

ಚರಿತ್ರೆಯಲ್ಲಿ ಸ್ಮರಿಸುವಂತದು. ವಚನಕಾರರು ಮಹಾನ್ ಕ್ರಾಂತಿಕಾರರು. ವೇದ, ಉಪನಿಷತ್ ಆಲೋಚನೆಗಳಿಗಿಂತ ಮುಂದೆ ಹೋದವರು. ಇಂತಹ ಕ್ರಾಂತಿಯನ್ನು ಪ್ರಪಂಚ ಮತ್ತೆ ಕಾಣಲಿಲ್ಲ.

2. ವಚನಕಾರರು ಅವತಾರಿಗಳು. ಕಾರಣಿಕರು. ಪರಮಾತ್ಮನ ಪ್ರೇರಣೆಯಂತೆ ಧರ್ಮದ ಜಾಗೃತಿಗಾಗಿ ಭುವಿಗಿಳಿದವರು. ಅವರಿಗೆ ಹೋಲಿಸಲು ಇತರ ಮಹಾನುಭಾವಿಗಳಿಲ್ಲ.

3. ವಚನಕಾರರು ಚೂರುಪಾರು ಸುಧಾರಣೆ ತಂದರು. ಅವರದೇನಿದ್ದರೂ ಕ್ರಾಂತಿಅಲ್ಲ. ಸಮಾಜವನ್ನು ತಿದ್ದುವ ಕಾರ್ಯಮಾಡಿದರು. ಇವರು ಇಡೀ ವ್ಯವಸ್ಥೆಯನ್ನು ಬದಲಿಸಲಿಲ್ಲ. ಇವರ ಕಾಲದಲ್ಲಿ ಕಾಯಕದ ಬದಲಾವಣೆ ಆಗಲಿಲ್ಲ. ಜಾತಿ, ವರ್ಗಕಲಹ, ಅಂತರ ಅಳಿಯಲಿಲ್ಲ. ಶೋಷಣೆಯ ಮೂಲವಾದ ಧರ್ಮವನ್ನು ಎತ್ತಿಹಿಡಿದು ಜಂಗಮದ ಮೂಲಕ ಶೋಷಣೆಗೆ, ನಿರುಪದ್ರವಿ ಜೀವಿಗಳಿಗೆ ಕಾಯಕ ಮಾಡದ ಜಂಗಮರಿಗೆ ಬೆಂಬಲ ನೀಡಿದರು.

4. ವಚನಕಾರರು ಸಮಾಜವನ್ನು ಪ್ರಾಮಾಣಿಕವಾಗಿ ತಿದ್ದಿದವರು. ಅವರ ವಚನಗಳಭಾಷೆ ಕನ್ನಡಕ್ಕೆ ಹೊಸ ಸತ್ವ ಕೊಟ್ಟಿತು. ಹೊಸ ಸಾಹಿತ್ಯರಚನೆಗೆ ಪ್ರೇರಣೆ ನೀಡಿತು. ಕ್ರಾಂತಿಕಾರಕವಾದ ಆಲೋಚನೆಗಳು ಅವರ ಬದುಕಿನಲ್ಲಿ ವ್ಯಕ್ತ ಆದವು. ಅವರ ಬದುಕು ನಡೆದು–ನುಡಿದ ಬದುಕು. ವಚನಕಾರರ ಸಂಘಟನೆ ಆಕಸ್ಮಿಕ ಬೆಳವಣಿಗೆಯಿಂದ ಕೂಡಿದ್ದು.

ಈ ತೆರದ ನಾಲ್ಕು ಧೋರಣೆಗಳಲ್ಲಿಯೂ ನಿಜಾಂಶ ಅಲ್ಲಲ್ಲಿ ಹಂಚಿಹೋಗಿದೆ. ನೋಡುವ ದೃಷ್ಟಿಕೂಡ ಮಿತಿ ಹಾಕಿದೆ. ಈ ನಾಲ್ಕು ಆಲೋಚನೆಗಳು ನಾಲ್ಕು ವಿಭಾಗದ ಚಿಂತಕರಿಂದ ಹೊರಬಂದವು.

1. ಬಜಾರ್ ಪುಸ್ತಕ ಬರೆದು, ತೀರಸಾಮಾನ್ಯರಿಗೆ ಭಕ್ತಿ, ಶ್ರದ್ಧೆ ಕಲಿಸುವ ಅನೇಕ ತಪ್ಪುಪಾಠ, ತಪ್ಪು ಕಲ್ಪನೆ ಬೆಂಬಲಿಸುವ ಕೃತಿಗಳು.

2. ವಚನಕಾರರು ಬರೆದದ್ದೆಲ್ಲ ಅಮೂಲ್ಯ ಎಂದು ವೈಭವಿಸಿ ಹೇಳುವ ಮತಾಭಿಮಾನ ವ್ಯಕ್ತಪಡಿಸುವ ಕೃತಿಗಳು.

3. ಸಾಹಿತಿಗಳಾದ ಕೆಲವರು ವಚನಗಳನ್ನು ಪೂರ್ಣವಾಗಿ ಅಧ್ಯಯನ

ಮಾಡದೆ ಎಲ್ಲೋ ಒಂದೆರಡು ವಚನಗಳನ್ನು ಗಮನಿಸಿ ಸಾರಾಸಗಟಾಗಿ ಮಾತ ಡುವ ಕೃತಿಗಳು.

4. ವಚನ ಸಾಹಿತ್ಯವನ್ನು ಅಂದರೆ ಸಂಪಾದಿತ ವಚನಗಳು, ಅವರ ಮೇಲೆ ಬಂದ ಕಾವ್ಯಗಳು, ಸಾಹಿತ್ಯ ಲೇಖನಗಳು, ವಿಚಾರಪೂರಿತ ಬರಹ ಇವುಗಳನ್ನು ಅಧ್ಯಯನಮಾಡಿ, ಸಂಶೋಧನೆ ನಡೆಸಿ ಇಲ್ಲವೆ ಆಳ ಅಧ್ಯಯನದ ಫಲವಾಗಿ ಮೂಡಿಬರುವ ಕೃತಿಗಳು.

ಈ ನಾಲ್ಕನೆಯ ಚಿಂತಕರ ಆಲೋಚನೆಗಳು, ಸಂಶೋಧನೆಗಳು ನಮಗೆ ಮುಖ್ಯ. ಇಲ್ಲಿ ಪೂರ್ಣವಾಗಿ ವಚನಸಾಹಿತ್ಯದ ಅಧ್ಯಯನ ನಡೆದು ಅನಂತರ ತಮಗೆ ಕಂಡುಬಂದ ನಿಜಾಂಶವನ್ನು ವ್ಯಕ್ತಪಡಿಸುವ ಧೋರಣೆಗಳು ವಚನ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಲು ದಾರಿದೀಪವಿದ್ದಂತೆ ಮಾರ್ಗದರ್ಶಿಯಾಗು ತ್ತವೆ. ಮೂರನೆಯ ಚಿಂತಕರು ಪ್ರತಿಭಾವಂತರಿದ್ದರೂ ಅವರ ಒಂದೆರಡು ಹೇಳಿಕೆಗಳು ಸರಿಯಿದ್ದರೂ ಅವು ಅವರ ಮೂಗಿನ ನೇರಕ್ಕೆ ಸಮ ಇರುತ್ತವೆ. ಅಲ್ಲದೆ ವಚನಸಾಹಿತ್ಯವನ್ನು ಇವರು ವಿವರ ವಿವರವಾಗಿ ಅಧ್ಯಯನ ನಡೆಸದೆ ಆನುಷಂಗಿಕವಾಗಿ ಮಾತನಾಡುತ್ತಾರೆ. [ನಿಜಾಂಶಕ್ಕಿಂತ ಭಾಷೆಯ ಕಸರತ್ತು, ಪ್ರಚಾರದ ಆರ್ಭಟ ಹೆಚ್ಚು. ಅಲ್ಲದೆ ವಚನ ಸಾಹಿತ್ಯವನ್ನು ಇವರು ಭಾಷೆಯ ದೃಷ್ಟಿಯಿಂದ ಮಾತ್ರವೇ ಗಮನಿಸುವವರು. ಅವರ ಸಂಘಟನೆ ಇತ್ಯಾದಿಗಳು ಇವರಿಗೆ ಅಷ್ಟು ಮುಖ್ಯಅಲ್ಲ. ಅವರು ತಂದದ್ದು ಚೂರು ಪಾರು ಸುಧಾರಣೆ ಎಂದು ಕೈತೊಳೆದುಕೊಳ್ಳುವುದರಲ್ಲಿ ಆತುರ ಹೆಚ್ಚು.

ಎರಡನೆಯ ಥರದ ಕೃತಿಗಳು ತಾವು ವೀರಶೈವರಾದ್ದರಿಂದ, ವಚನಕಾರರೂ ಅವರೇ ಆದ್ದರಿಂದ ಅದನ್ನು ಪರಿಶೀಲಿಸುವಲ್ಲಿ ಆಸಕ್ತಿ ಹೆಚ್ಚು. ನಿರ್ಣಯ ಮತ್ತು ಅಧ್ಯಯನದಲ್ಲಿ ಮತಾಭಿಮಾನ ತಲೆಹಾಕಿ ವಿಪರೀತಕ್ಕೆ ಒಯ್ಯುತ್ತವೆ. ವಚನ ಸಾಹಿತ್ಯವನ್ನು ಆಳವಾಗಿ ಅಧ್ಯಯನಮಾಡಿದ್ದರೂ ಹಿಂದುವರಿದ ಆಲೋಚನೆಗಳು ಧರ್ಮಾಭಿಮಾನದಿಂದ ವ್ಯಕ್ತ ಆಗುತ್ತವೆ. ಅದನ್ನು ನಿವಾರಿಸಿಕೊಂಡು ಮಾತನಾಡುವವರಿಂದ ಉತ್ತಮ ಮತ್ತು ಹೊಸ ವಿಷಯಗಳು ವ್ಯಕ್ತ ಆಗಲು ಸಾಧ್ಯವಿದೆ.

ಮೊದಲನೆಯ ಚಿಂತನೆಗಳು ಹಣ ಕಾರಣವಾಗಿ ಪುಸ್ತಕ ರೂಪದಲ್ಲಿ ಮೇಳೈಸುತ್ತವೆ. ಇಲ್ಲಿ ಓದುಬರಹವನ್ನು ಸುಮಾರಾಗಿ ಬಲ್ಲ ಮತ್ತು ಧರ್ಮಾ

ನುಯಿಗಳಾದವರಿಗೆ ಸಾಮಗ್ರಿ ಒದಗಿಸುವ ಸಲುವಾಗಿ ಅಚ್ಚಾದ ಕೃತಿಗಳಾಗಿರುತ್ತವೆ. ಇಲ್ಲೆಲ್ಲ ವೈಭವಿಸುವಿಕೆ ತೀರ ಹೆಚ್ಚು. ಚಿಂತನೆ ಇಲ್ಲವೇ ಇಲ್ಲ ಎಂದರೂ ಸಲ್ಲುತ್ತದೆ. ಪ್ರಶ್ನಿಸುವ, ಅನುಮಾನಿಸುವ ಆಲೋಚನೆಗಳು ಇಲ್ಲ. ಅಲ್ಲದೆ ಎಲ್ಲ ವಚನಸಾಹಿತ್ಯದ ಪರಿಚಯ ಇವರಿಗಿರುವುದಿಲ್ಲ. ಇಲ್ಲಿ ಪುಸ್ತಕ ರಚನೆಯಾಗುವುದು ಇಂತಹ ಜನರಿಗೆ ಮಾತ್ರ ಎಂದು ನಿರ್ದಿಷ್ಟವಾಗಿ ಇರುತ್ತದೆ. ಅಂತೆಯೇ ಇವರುಕೂಡ ತಮ್ಮನ್ನೇ ನಿರ್ದೇಶಿಸಿ ಉಂಟಾದ ಬೀದಿ ಪುಸ್ತಕಗಳನ್ನು ಮಾತ್ರ ಇವರು ಓದುತ್ತಾರೆ. ಇಲ್ಲಿ ಓದು ಭಕ್ತಿಗೆ ಮೂಲಸೆಲೆಯಾಗುತ್ತದೆ. ಅಂಥ ಶ್ರದ್ಧೆಯನ್ನು ಹೆಚ್ಚು ಬೆಳೆಸುತ್ತದೆ.

ವಚನಕಾರರ ಒಟ್ಟು ಸಂಘಟನೆಯನ್ನು ಅಭ್ಯಾಸಮಾಡಿದ, ಸಂಶೋಧನೆ ಮಾಡಿದ, ವಿದ್ವಾಂಸರು ಹೆಚ್ಚು ಹೊಸ ವಿಷಯಗಳನ್ನು ಪ್ರಾಮಾಣಿಕ ಆಲೋಚನೆಯನ್ನು ಮುಂದಿಟ್ಟಿದ್ದಾರೆ. ಈ ದಿಸೆಯಲ್ಲಿ ಪಿ.ಜಿ. ಹಳಕಟ್ಟಿ, ಶಿ.ಶಿ. ಬಸವನಾಳ, ಎಂ. ಆರ್. ಶ್ರೀನಿವಾಸಮೂರ್ತಿ, ಎಲ್. ಬಸವರಾಜು, ಆರ್. ಸಿ. ಹಿರೇಮಠ, ಎಂ. ಚಿದಾನಂದಮೂರ್ತಿ, ಎಚ್. ತಿಪ್ಪೇರುದ್ರಸ್ವಾಮಿ ಇವರುಗಳು ವಚನ ಸಾಹಿತ್ಯದ ಬಗೆಗೆ ವಿಶೇಷ ಅಧ್ಯಯನ ನಡೆಸಿ ಹೊಸವಿಷಯಗಳನ್ನು ಹೊರಗೆಡವಿದ್ದಾರೆ. ಉಳಿದವರಲ್ಲಿ ಗ್ರಂಥಸಂಪಾದನೆಯ ದಿಸೆಯಲ್ಲಿ ಮತ್ತು ಲೇಖನ ಬರೆಯುವಲ್ಲಿ ಅಥವಾ ಸಾಹಿತ್ಯ, ಕಾವ್ಯಕ್ಕೆ ಸಂಬಂಧಿಸುವಂತೆ ಮಾತನಾಡುವಲ್ಲಿ ಅಲ್ಲಲ್ಲಿ ಗಮನಾರ್ಹಮಾತುಗಳು ವ್ಯಕ್ತಆಗಿವೆ. ಈ ಚಿಂತಕರಲ್ಲಿ ಕೆಲವರು ಬಸವಣ್ಣನನ್ನು ಇತರ ಮಹಾನುಭಾವಿಗಳಿಗೆ(ಲೂಥರ್, ಗಾಂಧಿ, ಮಾರ್ಕ್ಸ್, ಮಹಮದ್, ಏಸು) ಹೋಲಿಸಿದ ಉದಾಹರಣೆಗಳೂ ಇವೆ. ಆದರೆ ಇಲ್ಲಿ ಕೇವಲ ಮಾರ್ಗದ ಸ್ಥೂಲ ಹೋಲಿಕೆ ಹೆಸರಿಗಷ್ಟೇ ನಿರ್ದೇಶವಾಗಿದೆ. ಪರಿಶೀಲನೆ ಈವರೆಗೆ ನಡೆದೇ ಇಲ್ಲ ಎಂದರೂ ಸಲ್ಲುತ್ತದೆ.

ವಚನಕಾರರು ಆಂದೋಲನ ತಂದರು. ಇವರ ಆಂದೋಲನ ಸಾಹಿತ್ಯದ ಮೇಲೂ ಪ್ರಭಾವ ಬೀರಿತು. ಜನಸಾಮಾನ್ಯರಿಗೂ ತಲುಪಿತು. ಈ ಆಂದೋಲನದಲ್ಲಿ ನಾಯಕರಷ್ಟೇ ಅನುಯಾಯಿಗಳ ಪಾತ್ರವು ಮುಖ್ಯ. ಈ ದಿಸೆಯಲ್ಲಿ ಮುಂದುವರಿದ ಆಲೋಚನೆ ಇದೊಂದೇ. ಇಲ್ಲಿ 'ಆಂದೋಲನ' ಶಬ್ದವನ್ನು ನಾಗರಿಕವಾಗಿ ಮಾತ್ರ ಆರ್ಭಟ, ಗದ್ದಲ, ಕೊಲೆ, ರಕ್ತಪಾತ ಹೊರತಾಗಿ ಸಂಘಟನೆ ಉಂಟುಮಾಡುವ, ಬದಲಾವಣೆ ತರುವ ಅರ್ಥದಲ್ಲಿ ಇವರು ಬಳಸಿದ್ದಾರೆ.

**ಸಮಾಜ ಸುಧಾರಣೆಯಾವ್ರದು ? ಆಂದೋಲನ ಯಾವುದು ?**

ಇರುವ ವ್ಯವಸ್ಥೆಯನ್ನು ಒಪ್ಪಿಕೊಂಡು ಅದರಲ್ಲಿದ್ದ ದೋಷಗಳನ್ನು ನಿರೋಧಿಸಿ ಮಾನ್ಯವಾದವುಗಳನ್ನು ಒಪ್ಪಿಕೊಂಡು ಹೊಸದಾಗಿ ಕೆಲವನ್ನು ಆಚರಣೆಗೆ ತಂದು ಮುಂದುವರಿಯಬಹುದು. ಸಮಾಜ ಸುಧಾರಣೆಯನ್ನು ಚಳುವಳಿ ತರುತ್ತದೆ. ಸುಧಾರಣೆ ರಾಜಕೀಯ,ಆರ್ಥಿಕ,ಧಾರ್ಮಿಕ ಯಾವುದೇ ಒಂದೊಂದು ಕ್ಷೇತ್ರದಲ್ಲೂ ಉಂಟಾಗಬಹುದು. 1975 ರ ತುರ್ತು ಪರಿಸ್ಥಿತಿ ವಿರೋಧಿಸಿ ಉಂಟಾದ ಜೆ. ಪಿ. ಚಳುವಳಿ ಸುಧಾರಣೆ ತರಲು ಪ್ರಯತ್ನಿಸಿತ್ತು. ಕಾನ್‌ಸ್ಟಿಟ್ಯೂಷನ್‌ನಲ್ಲಿ ಅಲ್ಲಲ್ಲಿ ಮಾರ್ಪಾಡು ತಂದಿತು. ಇದು ಕೇವಲ ರಾಜಕೀಯ ಕ್ಷೇತ್ರದಲ್ಲಿ ಮಾತ್ರ ಆದ ಸುಧಾರಣೆ. ಈ ಸುಧಾರಣೆ ಇನ್ನಿತರ ಕ್ಷೇತ್ರದ ಮೇಲೆ ಪ್ರಭಾವ ಬೀರಲಿಲ್ಲ. ವಚನಕಾರರ ನಂತರ ಬಂದ ಶಿವಶರಣರ ಚಳುವಳಿಯೂ ಇಂಥದೇ. ಇದು ಕೇವಲ ಧಾರ್ಮಿಕ ಕ್ಷೇತ್ರದಲ್ಲಿ ಮಾತ್ರ ಬದಲಾವಣೆ ತಂದಿತು. ವಚನಕಾರರ ಒಟ್ಟು ಧೋರಣೆಗಳನ್ನು ಒಪ್ಪಿಕೊಂಡು ಮಠ ಕಟ್ಟುವ, ವಚನಕಾರರಿಗೆ ವಿರುದ್ಧವಾದರೂ ದೇವಸ್ಥಾನ ಕಟ್ಟುವ, ವಚನಗಳನ್ನು ತಿದ್ದುವ, ಆಚರಣೆಗಳಲ್ಲಿ ವಿರಕ್ತ ಇತ್ಯಾದಿ ಹುಯಿಲು ಎಬ್ಬಿಸುವ ಧೋರಣೆಗಳು ನಂತರ ವ್ಯಕ್ತಆದವು. ಇಲ್ಲೆಲ್ಲ ಇರುವುದನ್ನು ಸಮಗ್ರವಾಗಿ ಒಪ್ಪಿಕೊಂಡದ್ದಿದೆ. ಮಾರ್ಪಾಡು, ಬದಲಾವಣೆ ನಡೆಯಲೇ ಇಲ್ಲ. ಅದೇನಿದ್ದರೂ ಪ್ರಚಾರ ಕಾರ್ಯ ಮಾತ್ರನಡೆಸಿತು ಎಂದು ಮಾತನಾಡಿದರೂ ಈ ಪ್ರಚಾರಕಾರ್ಯದ ಸಡಗರದಲ್ಲಿ ಆಗಿರುವ ವೈಪರೀತ್ಯಗಳನ್ನು ಹಿಂದುವರಿದ ಸುಧಾರಣೆಗಳೆಂದೂ ಮತ್ತೆ ಕೆಲವನ್ನು ಸುಧಾರಣೆಯೆಂದು ಕರೆಯಬಹುದು. (ದೇವಸ್ಥಾನ, ಮಠ,ಜಂಗಮ ಅಥವಾ ವಿರಕ್ತರಿಗೆ ಪುಷ್ಟಿಕೊಡುವುದು ಬೇರೆ ಬೇರೆ ದೃಷ್ಟಿಯಿಂದ ಹಿಂದುವರಿದ ವಾಗಿಯೂ, ಮುಂದುವರಿದವುಗಳಾಗಿಯೂ ಕಾಣುತ್ತವೆ.)

ವಚನಕಾರರು ತಮ್ಮ ಕಾಲದಲ್ಲಿ ರಾಜಕೀಯ, ಆರ್ಥಿಕವ್ಯವಸ್ಥೆಯನ್ನು ಒಪ್ಪಿಕೊಂಡರು ನಿಜ. ಆದರೆ ಧಾರ್ಮಿಕ ವ್ಯವಸ್ಥೆಯನ್ನು ಅವರು ಪೂರ್ಣವಾಗಿ ಪುನಃ ಸ್ಥಾಪನೆಗೊಳಿಸಿದರು. ಅವರೆಗೆ ಅದು ಅಲ್ಲಲ್ಲಿ ಹಂಚಿ ಹೋಗಿದ್ದದ್ದು ಇವರಿಂದ ಒಟ್ಟು ರೂಪಪಡೆದು ಸುಸಂಘಟಿತ ವ್ಯಸಸ್ಥೆ ಆಯಿತು.

ಲಿಂಗಾಯತ ಧರ್ಮ ಆಯಿತು. ಇದು ಧಾರ್ಮಿಕವಾಗಿ ಪರಿವಲಯದಲ್ಲಿ ಸುಧಾರಣೆತಂದಿತು ನಿಜ. ಆದರೆ ಅದು ಸುಧಾರಣೆಯ ನೆಲೆಯಲ್ಲಿ ಮಾತ್ರ ನಿಲ್ಲಲಿಲ್ಲ. ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡಿತು.

ಭಾರತದ 1947ರ ಸ್ವಾತಂತ್ರ್ಯ ಸಂಗ್ರಾಮದ ಆಂದೋಲನಕ್ಕೆ ಉತ್ತಮ ಉದಾರಣೆಯಾಗಿದೆ. ಚಳುವಳಿಯಾಗಿ ಬೆಳವಣಿಗೆ ಪಡೆದದ್ದು ಆದೋಲನದಲ್ಲಿ ಪರ್ಯವಸಾನ ಆಯಿತು. ದೇಶದಾದ್ಯಂತ ಎಲ್ಲ ವರ್ಣ, ವರ್ಗದ ಜನಗು ಈ ಆಂದೋಲನದಲ್ಲಿ ಧುಮುಕಿದರು. ಅದುವರೆಗೆ ಭಾರತದಲ್ಲಿ ರಾಜಪ್ರಭುತ್ವದ ಮೂಲಕ ಹರಿದು ಹಂಚಿಹೋಗಿದ್ದ ಆಡಳಿತ ನೀತಿ ಭಾರತಮಟ್ಟದಲ್ಲಿ ಪುನಃ ಸ್ಥಾಪನೆಯಾಯಿತು. ಇಂಥದೇ ಪುನಃ ಸ್ಥಾಪನೆಯ ಘಟನೆ ವಚನಕಾರರಲ್ಲಿ ಹನ್ನೆರಡನೇ ಶತಮಾನದಲ್ಲಿ ಸಂಘಟಿಸಿತು. ರಾಷ್ಟ್ರೀಯತೆ, ಮತಾಭಿಮಾನ, ಸಾಮಾಜಿಕ ಸ್ಥಾನಮಾನಗಳು ರಾಜರ ಕಾಲದಲ್ಲಿದ್ದಂತೆ ಭಾರತ ಮಟ್ಟದಲ್ಲಿ ಮತ್ತೆ ಎದ್ದು ಕಾಣುವಂತೆ ಭದ್ರವಾಗಿ ನೆಲೆಯೂರಿದವು. ಹಾಗೆಯೇ ವಚನಕಾರರ ಕಾಲದಲ್ಲಿ ಕೂಡ ಅದುವರೆಗಿದ್ದ ಶಿವೋಪಾಸನೆ, ಶಿವಭಕ್ತರ ಪ್ರೀತ್ಯರ್ಥ ಅರ್ಪಣೆ, ಅನುಭಾವಮಾರ್ಗ ಇತ್ಯಾದಿ ಹಲವುಹತ್ತುಗಳು ಶಿವಶರಣರ ಕಾಲದಲ್ಲಿ ಹೊಸ ಸಂಘಟನೆಯಿಂದಾಗಿ ಬಲಗೊಂಡವು. ಲಿಂಗಾಯತ ಧರ್ಮವಾಗಿ ನೆಲೆಯೂರಿತು.

ಜೇಡರ ದಾಸಿಮಯ್ಯ ಪ್ರಾಚೀನ ವಚನಕಾರ. ಆಂದೋಲನದ ಪೂರ್ಣ ಚಟುವಟಿಕೆ ಈತನಿಂದ ಆರಂಭವಾಗಿದೆ. ಇತ್ಯಾದಿಮಾತುಗಳು ಇದುವರೆಗೆ ಪ್ರಚಲಿತ. ದೇವರದಾಸಿಮಯ್ಯ,[42] ಜೇಡರದಾಸಿಮಯ್ಯ[43] ಬೇರೆ ಬೇರೆ ಕಾಲದವರು. ಎಂದು ಒಂದಿಬ್ಬರು ಅಭಿಪ್ರಾಯ ಪಟ್ಟಿದ್ದಾರೆ. ಜೇಡರ ದಾಸಿಮಯ್ಯನಿಂದ ಬಸವಣ್ಣ ಪ್ರಭಾವಿತ ಆಗಿದ್ದಾನೆ ಎಂಬುದು ಇದುವರೆಗೆ ಎಲ್ಲರ ಅಭಿಪ್ರಾಯವಾಗಿದೆ. ಡೋಹರ ಕಕ್ಕಯ್ಯ, ಮಾದಾರಚೆನ್ನಯ್ಯ, ಶಂಕರದಾಸಿಮಯ್ಯ, ಸಕಲೇಶ ಮಾದರಸ ಬಸವಣ್ಣನಿಂದ ಪ್ರಭಾವಿತ ಆದಂತೆ ಜೇಡರದಾಸಿಮಯ್ಯನೂ ಪ್ರಭಾವಿತ ಆಗಿರಬಹುದೆ ?

---

42. ಎಂ. ಚಿದಾನಂದ ಮೂರ್ತಿ : ವಚನ ಸಾಹಿತ್ಯ, ಪುಟ 13.
43. ಅದೇ, ಪುಟ 14.

ವಚನದ ಉಗಮ ಇತ್ಯಾದಿ ಚರ್ಚೆಗೆ ಇಲ್ಲಿ ಸ್ಥಳವಿಲ್ಲವಾದ್ದರಿಂದ ವಚನಕಾರರ ಆಂದೋಲನದ ಸ್ವರೂಪವನ್ನೇ ಮುಂದೆ ಚರ್ಚಿಸಲಾಗುವುದು. ಧರ್ಮ ಕಾರಣವಾಗಿ ಧಾರ್ಮಿಕ ಕ್ಷೇತ್ರದಲ್ಲಿ ಉಂಟಾಗುವ ಆಂದೋಲನ ಮೊದಲು ಪ್ರಚಾರ, ಪ್ರತಿಭಟನೆಯ ಸ್ವರೂಪದಲ್ಲಿಯೇ ವ್ಯಕ್ತ ಆಗುತ್ತದೆ. ಮೊದಲ ವಚನಕಾರ ಯಾರು ಎಂಬುದು ನಿರ್ಣಯಿಸುವುದು ಕಷ್ಟವಾದರೂ ವಚನಕಾರರಿಗೆ ಪೂರ್ವ ಭಾವಿಯಾಗಿ ಧರ್ಮ ಪ್ರಚಾರದ ಕಾರ್ಯ ದೇವರದಾಸಿಮಯ್ಯ, ಸಕಲೇಶಮಾದರಸ, ಕೆಂಭಾವಿ ಭೋಗಣ್ಣ ಇತ್ಯಾದಿ ಶಿವಶರಣರಿಂದ ಆರಂಭಗೊಂಡಿದೆ ಎನ್ನಲು ಅಡ್ಡಿಯೇನೂ ಇಲ್ಲ. ಇವರಿಗಿಂತ ಮುಂಚೆಯೂ ಈ ಕಾರ್ಯ ಆರಂಭವಾಗಿತ್ತು ಎಂದು ತಿಳಿಸಲು ನಮಗೆ ಸದ್ಯ ಆಧಾರವಿಲ್ಲ. ವಚನಗಳಿಂದ ದೇವರದಾಸಿಮಯ್ಯನ ಧರ್ಮಪ್ರಚಾರ ಕಾರ್ಯವೂ ಬಸವ ಪುರಾಣದಿಂದ ಶಂಕರದಾಸಿಮಯ್ಯ, ದೇವರ ದಾಸಿಮಯ್ಯರ ಧರ್ಮ ಪ್ರಚಾರ ಕಾರ್ಯವೂ ತಿಳಿದು ಬರುತ್ತದೆ. ಹರಿಹರ ಬರೆದ ರಗಳೆಗಳಿಂದ ಕೊಂಡಗಾಳಿ ಕೇಶಿರಾಜ ತೆಲುಗು ಜೊಮ್ಮಯ್ಯ, ಇವರುಗಳು ರಾಜನ ಅಧಿಕಾರವನ್ನು ನಿರ್ಲಕ್ಷಿಸಿ ನಾವು ಸರಿ ಇದ್ದರೆ ಅಧಿಕಾರ ಏನು ಮಾಡೀತು ಎಂದು ಶಿವಪಥದಲ್ಲಿ ಶಿವಭಕ್ತರಿಗೆ ಮಾತ್ರ ತಲೆಬಾಗಿ ನಡೆದರು. ಧರ್ಮ ಪ್ರಚಾರ ಕಾರ್ಯ ವಚನಕಾರರ ಪೂರ್ವದ ಆಂದೋಲನದ ಚಟುವಟಿಕೆಯೇ ಆಗಿದೆ. ಇಲ್ಲಿ ವ್ಯಕ್ತವಾಗುವುದು ಶಿವನ ಸಾರ್ವಭೌಮತ್ವ. ಸರ್ವ ವ್ಯಾಪಕತ್ವವನ್ನು ಪ್ರಸ್ತಾಪಿಸಿ ಅದರ ಅಗ್ಗಳಿಕೆಯನ್ನು ಸ್ಥಾಪಿಸುವುದು ಕಂಡು ಬರುತ್ತದೆ. ಆ ಮೂಲಕ ದೇವರೇ ಇರದ ಧರ್ಮವಾದ ಜೈನ ಧರ್ಮವನ್ನು, ಅನುಯಾಯಿಗಳನ್ನು ಅಲ್ಲಗಳೆದು ಅದರ ಪ್ರಭಾವ ತೊಡೆದು ಹಾಕಿ ಜೈನ ಧರ್ಮದ ಬದಲು ಶಿವಧರ್ಮವನ್ನು, ಶಿವನ ದೈವತ್ವವನ್ನು ಪ್ರತಿಷ್ಠಾಪಿಸುವುದು ಕಂಡು ಬರುತ್ತದೆ. ಇಲ್ಲೆಲ್ಲ ತಾನು ನಂಬಿದ ಶಿವನಲ್ಲಿ ಅಚಲವಾಗಿ ಭಕ್ತಿ, ಶ್ರದ್ಧೆ ಇರಿಸಿ ಆ ಮೂಲಕ ಛಲದಿಂದ ಆ ಶಿವನ ಆರಾಧನೆ ಆ ಮೂಲಕ ಹೊಸ ಆಚರಣೆಗಳನ್ನು ಬಳಕೆಗೆ ತರುವುದು ಅವರ ನಿಷ್ಠೆಯಾಗಿದೆ. ಇದು ಕೇವಲ ಧಾರ್ಮಿಕ ಕ್ಷೇತ್ರಕ್ಕೆ ಸೀಮಿತ ಆದರೂ ಅದು ಪ್ರಭಾವ ಬೀರಿದ್ದು ರಾಜಕೀಯವಾಗಿ ಉಚ್ಚ ಸ್ಥಾನದಲ್ಲಿದ್ದ ರಾಜ, ಮಹಾರಾಜರುಗಳ ಮೇಲೆ. ರಾಜರುಗಳ ಮೇಲೆ ಪ್ರಭಾವ ಬೀರುವುದರ ಮೂಲಕ ರಾಜಕೀಯ ಕ್ಷೇತ್ರದಲ್ಲಿಯೂ ತಲೆ ಹಾಕಿ ತನ್ನ ವ್ಯಾಪ್ತಿಯನ್ನು ವಿಸ್ತರಿಸಿ

ಕೊಂಡಿತು. ಜೈನರಾಜ ಶಿವಭಕ್ತನಾದರೆ ಅವನ ಅನೇಕ ಅನುಯಾಯಿಗಳು ಶಿವಭಕ್ತರಾಗುತ್ತಾರೆ. ಅವರ ಸಾಂಸ್ಕೃತಿಕ ಬದುಕು ಹೊಸ ಹುಟ್ಟು ಪಡೆಯುತ್ತದೆ.

ಸಮಾಜದಲ್ಲಿ ವರ್ಣ ವರ್ಗ ವ್ಯವಸ್ಥೆ ಹಾಗೆ ಉಳಿಯಿತು ಎಂಬುದು ನಿಜ ಆದರೂ ಅದು ಶಿವಭಕ್ತಿಯ ನೆಲೆಯಲ್ಲಿ ಭಕ್ತಿ ಕಾರಣವಾಗಿ ಕುದುರೆಗೆ ನೀರು ತೋರಿಸುವ ತನ್ನ ಆಳಿನ ತೊತ್ತಿಗೆ ಶರಣು ಹೋಗುವುದು ಗೌರವಿಸುವುದು ಇತ್ಯಾದಿ ಸಂಗತಿಗಳು ಆ ಮಟ್ಟಿಗೆ ರಾಜ ಮತ್ತು ತೊತ್ತಿನಲ್ಲಿ ಸಂಬಂಧ, ಬಾಂಧವ್ಯ ಕಲ್ಪಿಸಿದೆ. ಚೋಳರಾಜ ಮಾದಾರ ಚೆನ್ನನನ್ನು ಮನ್ನಿಸಿದ· ಆತನನ್ನು ಉತ್ಸವದಲ್ಲಿ ಮೆರೆಸಿ ಶರಣಾದ ಎಂಬ ಸಂಗತಿ[12] ವರ್ಗದ ಅಂತರವನ್ನು ನಿರ್ಲಕ್ಷಿಸಿದ್ದನ್ನು ಹೇಳುತ್ತದೆ. ದೇವರ ದಾಸಿಮಯ್ಯ ದೀಕ್ಷೆ ನೀಡಿದ್ದು ಸುಗ್ಗಲೆಗೆ. ಈಕೆ ದೇಸಿಂಗರಾಯನ (ಜಗದೇಕಮಲ್ಲ ?) ಪತ್ನಿ. ಈ ರಾಜನ ಮಡದಿ ಯಾವ ಸಂಪತ್ತು ಅಧಿಕಾರ ಇಲ್ಲದ ದಾಸಿಮಯ್ಯನಿಗೆ ಗೌರವ ನೀಡಿ ಆತನ ಶಿಷ್ಯಳಾಗಿದ್ದು ವರ್ಗ, ವರ್ಣವ್ಯವಸ್ಥೆಯನ್ನು ಮೀರಿ, ವರ್ಗ ಮತ್ತು ವರ್ಣಗಳು ಮನುಷ್ಯ ಮನುಷ್ಯರ ನಡುವಿನ ಕಂದರಗಳಾದರೆ ಅದು ಭಕ್ತಿ ಕಾರಣವಾಗಿ ಮುಚ್ಚಿ ಹೋಗುತ್ತದೆ. ದಾರಿ ಸುಗಮ ಆಗುತ್ತದೆ. ದೇವರ ದಾಸಿಮಯ್ಯ ಆಕೆಯನ್ನು ಶಿಷ್ಯಳನ್ನಾಗಿ ಸ್ವೀಕರಿಸಿ, ಅನಂತರ ಜೈನರನ್ನು ವಾದದಲ್ಲಿ ಸೋಲಿಸಿ ಶಿವಧರ್ಮದ ಧ್ವಜವನ್ನು ಸ್ಥಾಪಿಸಿದ್ದು ಒಂದು ಧರ್ಮದ ವ್ಯವಸ್ಥೆಯನ್ನು ಕಿತ್ತು ಹಾಕಿದ್ದನ್ನು ಹೇಳುತ್ತದೆ. ಪ್ರಪಂಚ ನಶ್ವರ, ಮೋಕ್ಷ ಗುರಿ. ದೇವರು ಇಲ್ಲ– ಇತ್ಯಾದಿ ನಂಬಿಕೆಗಳು ಆ ಮೂಲಕ ಭದ್ರವಾಗುತ್ತಿದ್ದ ವ್ಯವಸ್ಥೆ ಅಳಿದು ಹೋಗಿ–ಶಿವನೇ ಕರ್ತ, ಈ ಜಗತ್ತು ಅವನ ಕಾರ್ಯಾಗಾರ. ಗುರಿ ಅವನನ್ನು ಸೇರುವುದು – ಎಂಬುದಾಗಿ ಬದಲಾವಣೆ ಆಯಿತು. ಈ ಬದಲಾವಣೆ ತಮಿಳು ಪುರಾತನರಿಂದ ಪ್ರೇರೇಪಣೆ ಪಡೆದಿದ್ದಿತಾದರೂ ಅಲ್ಪ ಸ್ವಲ್ಪ ವ್ಯತ್ಯಾಸಗಳನ್ನು ಪಡೆದು ದೇವರದಾಸಿಮಯ್ಯನ ಕಾಲದಲ್ಲಿ ಬೆಳವಣಿಗೆ ಪಡೆದಿದೆ. ಈ ಪ್ರಚಾರ ಕಾರ್ಯ ವಚನಕಾರರ ಕಾಲದಲ್ಲಿ ಇನ್ನು ಹೆಚ್ಚು ವ್ಯಾಪಕವಾಗಿ ಮತ್ತು ಹೆಚ್ಚು ಹೆಚ್ಚು ತತ್ವಗಳ ಬೆಳವಣಿಗೆಯೊಂದಿಗೆ ಹಬ್ಬುತ್ತಾ ಹೋಯಿತು.

---

12 ಮಾದಾರ ಚೆನ್ನಯ್ಯಗಳು (ಹರಿಹರನ ಈ ರಗಳೆ ನೋಡಿರಿ)

ದೇವರದಾಸಿಮಯ್ಯನಂತೆ, ಸಕಲೇಶ ಮಾದರಸನೂ ಸಂಚರಿಸುತ್ತಾ ಶಿವ ಭಕ್ತಿ, ನಿಷ್ಠೆಗಳನ್ನು ಪ್ರಚಾರ ಮಾಡುತ್ತಿದ್ದ. ಬಸವಣ್ಣನಿಗಿಂತ ಪೂರ್ವ ದಲ್ಲಿ ಹೀಗೆ ಅಲ್ಲಲ್ಲಿ ಧರ್ಮ ಪ್ರಚಾರಕಾರ್ಯ ನಡೆಯುತ್ತಿತ್ತು. ಮತ್ತು ಅದು ಚೆದುರಿ ಹೋಗಿತ್ತು. ಮಾದಾರಚೆನ್ನ, ಡೋಹರ ಕಕ್ಕಯ್ಯ ಇವರಿಗೆ ಬಸವ ಣ್ಣನಿಗೆ ಮೊದಲು ಒಂದು ತಾವು ಸಿಗಲಿಲ್ಲ. ದೇವರದಾಸಿಮಯ್ಯನಾಗಲಿ, ಜೇಡರದಾಸಿಮಯ್ಯನಾಗಲಿ, ಶಂಕರ ದಾಸಿಮಯ್ಯನಾಗಲಿ ಬಂದ ಭಕ್ತರಿಗೆ ಉಪಚಾರ ಮಾಡುತ್ತಿದ್ದರಾದರೂ ಬಸವಣ್ಣನಂತೆ ಎಲ್ಲ ಭಕ್ತರಿಗೂ ಉಪಚಾರ ಮಾಡುವ ಸಾಮರ್ಥ್ಯ ಹೊಂದಿರಲಿಲ್ಲ. ಬಸವಣ್ಣನಿಗಿದ್ದದ್ದ ರಾಜಕೀಯ ಸ್ಥಾನ ಮಾನಗಳು, ಹಣದ ಸುಸ್ಥಿತಿ ಇವುಗಳು ಆಪೂರ್ವದ ಶರಣರಿಗೆ ಇರಲಿಲ್ಲ. ಅದ ರಿಂದ ಅವರು ಪ್ರಚಾರ ಕಾರ್ಯದಲ್ಲಿ ಏಕವಾಗಿಯೇ ಮುಂದುವರಿಯ ಬೇಕಾ ಯಿತು. ಇವರನ್ನು ಹಿಂಬಾಲಿಸುವ ಅನುಯಾಯಿಗಳಾಗಲಿ ಆಂದೋಲನದ ಸ್ವರೂಪವಾಗಲಿ ಆಗ ಉಂಟಾಗಲಿಲ್ಲ. ಕೆಂಭಾವಿಭೋಗಯ್ಯ, ದೇವರದಾಸಿ ಮಯ್ಯಾದಿಗಳೂ ಭಕ್ತರನ್ನು ಶಿವನೆಂದು ಕಾಣುತ್ತಿದ್ದರೂ ಅವರಲ್ಲಿಗೆ ಬರು ತ್ತಿದ್ದ ಭಕ್ತರು ತೀರ ಕಡಿಮೆ.

ದೇವರ ದಾಸಿಮಯ್ಯ ಶಿವಭಕ್ತನಾಗಿದ್ದುಕೊಂಡು ಕಾಯಕ ಅವಲಂಬಿಸಿ ಶಿವಧರ್ಮ ಪ್ರಚಾರಕನೂ ಆಗಿದ್ದನೋ ಹಾಗೆಯೇ ಅಲ್ಲಮನೂ ಸಾಧಕನಾಗಿ ಸಿದ್ಧನಾಗಿ ಸಂಚರಿಸುತ್ತ ಶಿವಧರ್ಮವನ್ನು ಶಿವನ ಸರ್ವ ಮಾನ್ಯತೆಯನ್ನು ಪ್ರಚಾರ ಮಾಡುತ್ತಿದ್ದ. ಅಲ್ಲಮನಂತೆ ಅನೇಕ ಅನುಭಾವಿಗಳು ಅಲ್ಲಲ್ಲಿ ಶಿವ ಭಕ್ತರಾಗಿದ್ದವರು ತಮ್ಮ ತಮ್ಮ ಪರಿಸರದಲ್ಲಿ ಶಿವನ ಸಾರ್ವಭೌಮತ್ವವನ್ನು, ಭಕ್ತರಿಗಾಗಿ 'ಶಿವ' ದುಂಬಾಲು ಬಿದ್ದು ಓಡಿ ಬರುವುದನ್ನು ತಿಳಿಸುತ್ತಿದ್ದರು. ಚೆದುರಿ ಹೋಗುತ್ತಿದ್ದ ಈ ಚಟುವಟಿಕೆಗಳಿಗೆ ಬಸವಣ್ಣನ ಮಹಾಮನೆ ಒಂದು ನಿಲ್ದಾಣವಾಯಿತು. ಯುದ್ಧದಲ್ಲಿ ತೊಡಗಿದ್ದ ಸೈನಿಕರು ಸಂಜೆ ಒಂದು ತಾಣ ದಲ್ಲಿ ಕಲೆತು ತಮ್ಮ ನಾಯಕನಿಂದ ಬೆಂಬಲ, ದೇಹ ಮತ್ತು ಮನಸ್ಸುಗಳಿಗೆ ಸ್ಥೈರ್ಯ ವಿಶ್ವಾಸ ಪಡೆದುಕೊಂಡು ಮರುದಿನ ತಮ್ಮ ಗುರಿಯಲ್ಲಿ ಮುಂದು ವರೆಯುವಂತೆ ವಚನಕಾರರು ಬಸವಣ್ಣನ ಮಹಾಮನೆಯಲ್ಲಿ ಆಶ್ರಯ ಪಡೆದು ಅನುಭಾವ ಗೋಷ್ಠಿಗಳಿಂದ ಪ್ರೇರಣೆ ಪಡೆದು ಮುಂದುವರಿದಿದ್ದಾರೆ. ಚೆದು ರಿದ್ದ ಶರಣರೆಲ್ಲ ಒಂದೆಡೆ ಕಲೆತು ಪರಸ್ಪರ ಪರಿಚಿತರಾಗಿ ಬಾಂಧವ್ಯದ ಬಟ್ಟೆ

ನೇಯ್ದರು. ಈ ಫಲವೇ ಹರಳಯ್ಯ ಮಧುವಯ್ಯ ನಡುವೆ ಆದ ನಂಟು. ಅದೇ ರೀತಿಯಲ್ಲಿ ಶೂದ್ರ, ಅಸ್ಪೃಶ್ಯರೆಂಬ ತಾರತಮ್ಯವಿಲ್ಲದೆ ಎಲ್ಲರ ಮನೆಯಲ್ಲೂ (ಶಿವಭಕ್ತರಲ್ಲಿ ಮಾತ್ರ) ಪರಸ್ಪರ ಉಡುವುದು, ಉಣ್ಣುವುದು ಮೊದಲಾಯಿತು. ಹೊಡೆಹುಲ್ಲ ಬಂಕಣ್ಣ, ರಕ್ಕಸ ಬೊಮ್ಮಯ್ಯ, ಸೋಮದೇವಯ್ಯ, ವೈದ್ಯಸಂಗಯ್ಯ, ಗಾವುದಿ ಮಾಚಯ್ಯ, ಮಿಂಡಸಂಗಯ್ಯ, ರಾಯಸದ ಮಂಚಣ್ಣ, ಮೇದರ ಕೇತಯ್ಯ, ಕರಾಳಕೇತಯ್ಯ ಕಲಕೇತಬೊಮ್ಮಯ್ಯ, ದಸರಯ್ಯ, ಬಾಚಿಕಾಯಕದ ಬಸವಪ್ಪ, ವೀರಮ್ಮ, ಗೊಗ್ಗವ್ವೆ, ಕಾಳವ್ವೆ, ಇತ್ಯಾದಿ ನೂರಾರು ಶಿವಶರಣ ಶರಣೆಯರು ಅಲ್ಲಮ, ಸಿದ್ಧರಾಮ, ಅಕ್ಕರಂತೆ ಕಲ್ಯಾಣದಲ್ಲಿ ಬಂದು ಸಂಗಮಿಸಿದರು.

ಹೀಗೆ ಬಂದವಲ್ಲಿ ಶೂದ್ರರು, ಅಸ್ಪೃಶ್ಯರು, ಪರಧರ್ಮೀಯರು, ರಾಜರು, ಸಾಮಂತರು, ದೊಡ್ಡ ಶಿವಭಕ್ತರು, ಮಹಾನುಭಾವಿಗಳು ಎಲ್ಲ ಇದ್ದಾರೆ. ಹೀಗೆ ಬಂದವರು ಸಾಮಾನ್ಯ ಶಿವಭಕ್ತರಾಗಿದ್ದರು ಇಲ್ಲ ನಂತರ ದೀಕ್ಷೆ ತೆಗೆದು ಕೊಂಡು ಶಿವಭಕ್ತರಾದರು. ಆ ಮೂಲಕ ತಮ್ಮದೇ ನಡೆ, ನುಡಿ, ಆಚಾರಗಳ ಸಮಾಜವೊಂದನ್ನು ಸ್ಥಾಪಿಸಿಕೊಂಡರು. ಹೀಗೆ ಸ್ಥಾಪಿಸಿಕೊಂಡವರಲ್ಲಿ ಶಿವ ಧ್ವಜದಡಿಯಲ್ಲಿ ಬರುವ ಮಂದಿ ಮಾತ್ರ ಎಂಬುದನ್ನು ಮರೆಯಬಾರದು.

## ಆಂದೋಲನದ ಮಿತಿಗಳು

ಕಲ್ಯಾಣದಲ್ಲಿ 1160ರಲ್ಲಿ ಎದ್ದು ಕಾಣುವಂತೆ ಉಂಟಾದ ಆಂದೋಲನದ ಮಿತಿಯನ್ನು ಹೀಗೆ ಗುರುತಿಸಬಹುದು. ಮೂಲತಃ ಇದು ಧಾರ್ಮಿಕ ಕ್ಷೇತ್ರದಲ್ಲಿ ಉಂಟಾದ ಬದಲಾವಣೆ. ಅದುವರೆಗೆ ಸ್ಥಾವರವಾಗಿದ್ದ, ಚಲಾವಣೆಗೆ ಹೊರತಾದ, ಹಳೆಯ ಮೌಲ್ಯಗಳ ವಿರುದ್ಧ ಇವರ ಬಂಡಾಯ ಉಂಟಾಯಿತು. ಅದುವರೆಗೆ ಧರ್ಮ ಹೇರಲಾಗುತ್ತಿದ್ದ ಹಲವು ವಿಧಿನಿಯಮಗಳ ಸಂಕೋಲೆಯಲ್ಲಿ ಇದು ಕಿತ್ತೊಗೆಯಿತು. ಶೂದ್ರ, ಅಸ್ಪೃಶ್ಯ ಜನಾಂಗಕ್ಕೆ ಕೊಡದಿರುವ ಸ್ಥಾನ ಮಾನಗಳನ್ನು ಬಸವಣ್ಣ, ಅಲ್ಲಮರ ನೇತೃತ್ವದಲ್ಲಿ ಪಡೆಯಲು ಸನ್ನಾಹ ಆಯಿತು. ಈ ಸ್ಥಾನಮಾನಗಳನ್ನು ಮೊದಲು ಮತ್ತು ನಂತರವೂ ಪಡೆದದ್ದು ಶರಣ ಸಮುದಾಯದಲ್ಲಿ ಮಾತ್ರ. ಶರಣ ಸಮುದಾಯವನ್ನು ಬಿಟ್ಟು ಹೊರಡಿದ್ದ ಬ್ರಾಹ್ಮಣರು, ಜೈನರು, ರಾಜರು ವೈಶ್ಯರು ಇವರೆ

ಲ್ಲರು ಶರಣರಾಗಿ ಸ್ಥಾನಮಾನ ಪಡೆದು ಕೊಂಡವರ ಬಗ್ಗೆ ಉದಾರವಾಗಿ ನಡೆದು ಕೊಂಡದ್ದಾಗಲಿ, ಅವರಲ್ಲಿ ಕೊಟ್ಟು ತೆಗೆದುಕೊಳ್ಳುವ ಭಾಂಧವ್ಯ ನಡೆಸಿದ್ದಾಗಲಿ ನಮಗೆ ತಿಳಿದು ಬರುವುದಿಲ್ಲ. ಶರಣರಲ್ಲಿ ರೂಪಿತವಾದ ಸಮಾಜ ತನ್ನದೇ ಆದ ಪರಿಸರದಲ್ಲಿ ಬೆಳವಣಿಗೆ ಪಡೆಯುತ್ತಾ ಹೋಯಿತು.

ಬಸವಣ್ಣನಿಗೆ ಮುಂಚೆ ಇದ್ದ ಬೌದ್ಧ, ಜೈನ, ವೈದಿಕ ಧರ್ಮಗಳು ಸಮಾಜದಲ್ಲಿ ಪರಿವರ್ತನೆಗೆ ಕಾರ್ಯ ನಡೆಸಿದ್ದುವು. ಆದರೆ ಇಲ್ಲಿ ವರ್ಣ ವರ್ಗದ ಸ್ತರ ಮೀರಿ ಸಾಮಾಜಿಕ ಆಂದೋಲನ ಘಂಟಿಸಲಿಲ್ಲ. ಅದೇನಿದ್ದರೂ ಹೆಚ್ಚು ಧಾರ್ಮಿಕ ಆದುದು. ಬಸವಣ್ಣ-ಅಲ್ಲಮ ನಾಯಕರುಗಳ ನೇತೃತ್ವದಲ್ಲಿ ಆದ ಧಾರ್ಮಿಕ ಜಾಗೃತಿ ಸಾಹಿತ್ಯ, ಸಾಮಾಜಿಕ ಕ್ಷೇತ್ರದಲ್ಲಿ ಉಂಟಾಯಿತು. ಇದು ಬಸವಣ್ಣನಿಂದಾಗಿ ರಾಜಕೀಯ ಕ್ಷೇತ್ರದ ವ್ಯಕ್ತಿಗಳಿಗೂ ಹರಡತೊಡಗಿತು. ರಾಜಪ್ರಭುತ್ವ ಮತ್ತು ಧರ್ಮ ಇವುಗಳ ಇತಿಮಿತಿಯಲ್ಲಿ ಸ್ಥೂಲವಾಗಿ ಇಲ್ಲಿ ತಿಳಿಯುವುದು ಸೂಕ್ತ. ಒಬ್ಬ ರಾಜನ ಆಳ್ವಿಕೆಯಲ್ಲಿ ಸಮಾಜದ ಎಲ್ಲ ವರ್ಗ ವರ್ಣಗಳೂ ಪಾಲುದಾರರಾಗಿರುತ್ತವೆ. ತಮ್ಮ ರಾಜನ ಆಳ್ವಿಕೆಗೆ ಅರ್ಥಾತ್ ತಮ್ಮ ನಾಡಿಗೆ ಧಕ್ಕೆ ಒದಗಿದಾಗ ಒಟ್ಟಾಗಿ ಇವರೆಲ್ಲರೂ ಒಟ್ಟುಗೂಡಿ ಅಡ್ಡಿಯನ್ನು ವಿರೋಧಿಸುತ್ತಾರೆ. ಅಷ್ಟರ ಮಟ್ಟಿಗೆ ರಾಜಕೀಯ ಕ್ಷೇತ್ರ ವರ್ಣ, ವರ್ಗಗಳ ಕಂದರಗಳನ್ನು ದಾಟುತ್ತದೆ. ಆದರೆ ಈ ರಾಜಕೀಯ ಕ್ಷೇತ್ರ ಭೌತಿಕವಾಗಿ ಒಂದು ಪ್ರದೇಶದ ವಿಸ್ತೀರ್ಣದಲ್ಲಿ ಸೀಮಿತವಾಗಿರುತ್ತದೆ. ಈ ಭೌತಿಕ ಪರಿಸರದಲ್ಲಿ ಹಲವು ಧರ್ಮ ಸಮಾಜಗಳು ಅಡಕಗೊಂಡಿರುತ್ತವಾದರೂ ರಾಜಪ್ರಭುತ್ವ ನಿರ್ದಿಷ್ಟ ಪ್ರದೇಶದ ಮಿತಿಯಲ್ಲಿರುತ್ತದೆ. ಅದೇ ಧಾರ್ಮಿಕ ಆಂದೋಲನದ ಕಾಲದಲ್ಲಿ ಒಂದು ಪ್ರದೇಶದಲ್ಲಿ ನಿರ್ದಿಷ್ಟವಾದ ಒಂದು ಧರ್ಮದವರು ಮಾತ್ರ ಅದರಲ್ಲಿ ಭಾಗಿಗಳಾಗುತ್ತಾರೆ. ಅದಕ್ಕೆ ಸಂಬಂಧಿಸಿದ ಇತರರು ಅದರಿಂದ ಹೊರತಾಗಿ ಉಳಿಯುತ್ತಾರೆ. ಆಂದೋಲನದಲ್ಲಿ ತೊಡಗುವವರೇ ಪ್ರದೇಶದಲ್ಲಿದ್ದ ಕೆಲವರು ಮಾತ್ರ ಇವರ ದಿಸೆಯಿಂದಾಗಿ ನಡೆದ ಆಂದೋಲನ ಸಾಹಿತ್ಯ, ಇವರಿಗಿದ್ದ ರಾಜಕೀಯಸ್ಥಾನ, ಸಾಮಾಜಿಕಸ್ಥಾನಗಳಲ್ಲಿ ಬದಲಾವಣೆ ತರುತ್ತದೆ. ಆ ಮಟ್ಟಿಗೆ ಇದಕ್ಕೆ ಧಾರ್ಮಿಕವಾದ ಮಿತಿ ಇದೆ. ಗಮನಿಸಬೇಕಾದ ಸಂಗತಿಯೆಂದರೆ ಧರ್ಮ ಭೌಗೋಳಿಕ ವ್ಯಾಪ್ತಿಯನ್ನು ದಾಟಿ

ಹಲವು ರಾಜ್ಯಗಳಿಗೆ ವ್ಯಾಪಿಸಬಲ್ಲುದು ಎಂಬುದನ್ನು ಹನ್ನೆರಡನೆಯ ಶತಮಾನದಲ್ಲಿ ಶರಣರ ಕಾಲದಲ್ಲಿ ಆದ ಆಂದೋಲನ ಕಲ್ಯಾಣದ ಯಾವುದೋ ಒಂದು ಧಾರ್ಮಿಕ ಅನುಯಾಯಿಗಳಲ್ಲಿ ಮಾತ್ರ ಸಂಭವಿಸಿತು ಎಂಬುದು ಸತ್ಯ. ಆದರೂ ಈ ಆಂದೋಲನದ ಅನುಯಾಯಿಗಳು ಹೊರಗಿನಿಂದ ಬರುವವರೂ ಆಗಿದ್ದರು. ಧರ್ಮ ರಾಜನ ಮೇಲೆ ಪ್ರಭಾವ ಬೀರುವುದರ ಮೂಲಕ ರಾಜಕೀಯ ಆ ಮೂಲಕ ಆರ್ಥಿಕ ಕ್ಷೇತ್ರವನ್ನು ವ್ಯಾಪಿಸಬಲ್ಲುದಾಗಿದೆ. ಈ ದೃಷ್ಟಿಯಿಂದ ಧರ್ಮ ರಾಜ್ಯದ ಗಡಿಯನ್ನು ದಾಟುತ್ತದೆ.

4ನೇ ಶತಮಾನದಿಂದ ಆರಂಭಗೊಂಡು 9 ನೇ ಶತಮಾನದ ಅಂತ್ಯದವರೆಗೆ ಶಿವನ ಉಪಾಸನೆಯ ಧರ್ಮ ಹರಡುತ್ತ ಹೋಯಿತು. ಚೋಳ, ಪಾಂಡ್ಯ, ಚೇರ ರಾಜರುಗಳು ಕೊಟ್ಟ ಮನ್ನಣೆಯಿಂದಾಗಿ, ಈ ರಾಜರುಗಳನ್ನು ತನ್ನ ಪ್ರಭಾವಲಯದೊಳಗೆ ತೆಗೆದುಕೊಂಡ ಕಾರಣವಾಗಿ ಅದು ಹರಡಿತು. ಈ ಸಂದರ್ಭದಲ್ಲಿ ಜೈನ, ವೈಷ್ಣವ ಧರ್ಮಗಳು ಇಳಿಗಾಲ ಅನುಭವಿಸಬೇಕಾಯಿತು. ಈ ತಮಿಳು ಪುರಾತನರಿಂದ ಪೂರ್ಣವಾಗಿ ಪ್ರಭಾವಿತವಾದ ಹನ್ನೆರಡನೇ ಶತಮಾನದ ಶರಣರ ಕಾಲದಲ್ಲಿ ಕೂಡ ಆದ ಆಂದೋಲನ ಅಂಥದೇ ಬೆಳವಣಿಗೆಯನ್ನು ತಂದಿತು. ಕೆಲವು ಪದ್ಧತಿ (ದೇವಾಲಯ ಕಟ್ಟಿಸುವುದು, ಯಜ್ಞ ಮಾಡುವುದು)ಗಳಲ್ಲಿ ಶರಣರು ಬೇರೆಯೇ ಆದರೂ ಅಲ್ಲಿ ಕಂಡು ಬಂದ ಭಕ್ತಿ, ಶ್ರದ್ಧೆ, ನಿಷ್ಠೆಗಳು ಇಲ್ಲಿಯೂ ವ್ಯಕ್ತವಾಯಿತು. ತಮಿಳು ಪುರಾತನರ ಕಾಲದಲ್ಲಿ ರಾಜಕೀಯವಾಗಿ ಹೆಚ್ಚು ಪ್ರಭಾವ ಉಂಟಾಯಿತು. ವಚನಕಾರರ ಕಾಲದಲ್ಲಿ ರಾಜಕೀಯವಾಗಿ ಹೆಚ್ಚು ವ್ಯಾಪಕವಾಗಿ ಉಂಟಾಗಲಿಲ್ಲ. ಮಾತ್ರವಲ್ಲ, ರಾಜಕಾರಣ ಕಾರಣವಾಗಿಯೇ ಆಂದೋಲನ ಅವಸಾನವಾಗುವ ಗತಿ ಒದಗಿತು.

ವಚನಕಾರರ ಆಂದೋಲನ ಸ್ತ್ರೀಯರಿಗೆ, ಶೂದ್ರರಿಗೆ, ಅಸ್ಪೃಶ್ಯರಿಗೆ ದೇವರನ್ನು ತಮ್ಮ ಕೈಯಲ್ಲಿ ಹಿಡಿದು ಪೂಜಿಸುವ ಹಕ್ಕು ಕೊಟ್ಟಿತು ನಿಜ. ಆದರೆ ಅವರ ವರ್ಗದ ಅಂತರವನ್ನು ಕಡಿಮೆ ಮಾಡಲಿಲ್ಲ. ಶಿವಭಕ್ತನಾದವನು ತನ್ನ ಹಿಂದಿನ ಕುಲ, ಜಾತಿಗಳನ್ನು ಸುಟ್ಟುಕೊಳ್ಳುತ್ತಾನೆಂಬ ಅವರ ಧೋರಣೆ ನಿಜವೇ ಇರಬಹುದು. ಆದರೆ ಅದು ತೊಡೆದು ಹೋಗಲಿಲ್ಲ. ಮೇದರ, ಮಾದರ, ಡೋಹರ ಇತ್ಯಾದಿಗಳು ವೃತ್ತಿ ಸೂಚಕವಾಗಿ ಉಳಿದು

ಬಂದರೂ ಜಾತಿಯನ್ನು ನಿರ್ದೇಶಿಸಿದವು. ಆತ ಚಪ್ಪಲಿ ಹೊಲೆಯುವುದು, ಬುಟ್ಟಿ ಹೆಣೆಯುವುದು, ಹಗ್ಗ ಹೊಸೆಯುವುದು, ಕಮ್ಮಾರ ಕೆಲಸ ಮಾಡುವುದು, ಮಡಕೆ ಮಾಡುವುದು ತಪ್ಪಲಿಲ್ಲ. ಈ ಕಾಯಕಳಿಗೆ ಆರ್ಥಿಕವಾಗಿ ಮಿತಿ ಇರುವುದರಿಂದ ವ್ಯಕ್ತಿ ಅನುಭವದಿಂದ ದೊಡ್ಡವರಾದರೂ ಒಟ್ಟು ರಾಜ್ಯದ ಸಂದರ್ಭದಲ್ಲಿ ಸ್ಥಾನಮಾನಗಳು ಲಭ್ಯ ಆಗಲಿಲ್ಲ. ಅಂಬಿಗರ ಚವುಡಯ್ಯನಾಗಲಿ, ಮಡಿವಾಳ ಮಾಚಯ್ಯನಾಗಲೀ ಧರ್ಮ ಕಾರಣವಾಗಿ ರಾಜ್ಯದ ಸಂದರ್ಭದಲ್ಲಿ ಭಂಡಾರಿಯಾಗಲಿ, ಮಂತ್ರಿಯಾಗಲಿ ಆಗಲಿಲ್ಲ. ಅದೇ ರಷಿಯದ ಆಂದೋಲನದ ಸಂದರ್ಭದಲ್ಲಿ ಉಂಟಾದ ಕ್ರಾಂತಿ ಅನೇಕ ಕೂಲಿಕಾರರು ಗಿರಣಿಯ ಮಾಲೀಕನನ್ನು ತೆಗೆದು ಹಾಕುವುದರ ಕಾರಣವಾಗಿ ಉಚ್ಚ ಸ್ಥಾನಗಳನ್ನು ಪಡೆದುಕೊಂಡರು.* ಅಲ್ಲಿ ಅವನ ಆರ್ಥಿಕ ಪರಿಸ್ಥಿತಿ, ರಾಜಕೀಯ ಸಾಮಾಜಿಕ ಸ್ಥಾನಮಾನಗಳು ಬದಲಾವಣೆಯಾದವು. ಬೆಳವಣಿಗೆ ಪಡೆದುವು. ವಚನಕಾರರ ಕಾಲದಲ್ಲಿಯಾದರೋ ಮೋಳಿಗೆಯ ಮಾರಯ್ಯನಂತಹವರು ರಾಜ್ಯ ಬಿಟ್ಟು ಹೆಚ್ಚಿನ ಅಧಿಕಾರ, ಹಣ ತೊರೆದು ಸೌದೆ ಹೊಡೆಯುವ ಕಾಯಕ ಅವಲಂಬಿಸಿದರು ನಿಜ. ಆದರೆ ಹೀಗೆ ಬಂದವರು ಎಷ್ಟು ಮಂದಿ ? ಶಿವಭಕ್ತನಾದವನು ಮತ್ತೊಬ್ಬನ ರಾಜಕೀಯ, ಆರ್ಥಿಕ, ಸ್ಥಾನಮಾನಗಳನ್ನು ನೋಡಬಾರದು ಎಂಬುದು ಸರಿಯೆ? ಅಲ್ಲದೆ ತಾನು ಸಂಗ್ರಹ ಮಾಡಿ ಮಡದಿ ಮಕ್ಕಳಿಗೆಂದು ಇಟ್ಟುಕೊಳ್ಳುತ್ತಿರಲಿಲ್ಲ ಎಂಬುದು ನಿಜವೇ ಆದರೂ ಒಟ್ಟು ಸಮಾಜದ ಸಂದರ್ಭದಲ್ಲಿ ಅವರ ಸ್ಥಾನ, ನಿರ್ದೇಶನ, ಅಧಿಕಾರ, ಹಣ ಕಾರಣವಾಗಿ ಆಗುತ್ತದೆ. ಹಣ ಮತ್ತು ಅಧಿಕಾರಕ್ಕೆ ಎಲ್ಲ ಸಂದರ್ಭದಲ್ಲಿಯೂ ಎಲ್ಲರ ನಡುವೆಯೂ ಬೆಲೆ ಇದೆ. ಸದ್ಗುಣಿಯಲ್ಲಿ ಹಣ, ಅಧಿಕಾರ ಇದ್ದರಂತೂ ಆತನ ಬೆಲೆ ಇನ್ನೂ ಹೆಚ್ಚುತ್ತದೆ. ಬಸವಣ್ಣನಿಗೆ ಆಗಿದ್ದುದಾದರೂ ಹೀಗೆಯೇ ಸಿದ್ಧರಾಮ ಬಸವಣ್ಣನಿಗಿಂತ ಹೆಚ್ಚು ಜನೋಪಯೋಗಿ ಕಾರ್ಯ ಮಾಡಿದ್ದ. ಅವನ

* (ಎಂ. ಚಿದಾನಂದ ಮೂರ್ತಿಗಳು ಗಮನಿಸಿದ್ದು) ಇಲ್ಲಿ ಗಮನಿಸಬೇಕಾದುದೆಂದರೆ ಪ್ರಪಂಚದ ಇತಿಹಾಸದಲ್ಲಿ ಮಹತ್ವದ ಕ್ರಾಂತಿ ಕಂಡಿರುವ ರಷಿಯದಲ್ಲಿ ಸ್ತ್ರೀ ಇದುವರೆಗೆ ಪ್ರಧಾನಿ ಆಗಿಲ್ಲ. ಆಕೆಗೆ ಆ ಅವಕಾಶ ದೊರೆತಿಲ್ಲ. ಭಾರತ ಸ್ವಾತಂತ್ರ್ಯ ಪಡೆದ 20 ವರ್ಷದಲ್ಲಿಯೇ ಮಹಿಳೆಯೊಬ್ಬಳು 11 ವರ್ಷ ಪ್ರಧಾನಿಯಾಗಿದ್ದಳು.

ಅನುಯಾಯಿಗಳೂ ಸೊನ್ನಲಿಗೆಯಲ್ಲಿ ಹೆಚ್ಚಿದ್ದರು. ಆತ ಬಸವಣ್ಣನಷ್ಟು ಸ್ಥಿತಿವಂತನಾಗಿಲ್ಲದಿರಬಹುದು. ಆದರೆ ಶರಣರು ಬಸವಣ್ಣನನ್ನು ಮಾತ್ರ ತಮ್ಮ ನಾಯಕನೆಂದು ಕರೆದರು. ಸ್ವತಃ ಅಲ್ಲಮನೇ ಬಸವಣ್ಣನನ್ನು ನಿರ್ದೇಶಿಸಿ ಅವನ ನಾಯಕತ್ವವನ್ನು, ಆಶ್ರಯವನ್ನು ಒಪ್ಪಿಕೊಂಡ. ಎಲ್ಲ ಬಿಟ್ಟು ತಿರುಗುವ, ಎಲ್ಲಾ ಸಾಧನೆಗಳನ್ನು ಸಿದ್ಧಿಸಿಕೊಂಡ ಅಲ್ಲಮ ಆಧ್ಯಾತ್ಮದಲ್ಲಿ, ಯೋಗದಲ್ಲಿ ಬಸವಣ್ಣನಿಗಿಂತ ಮಿಗಿಲಾಗಿದ್ದರೂ, ಹಣ, ಅಧಿಕಾರ ಕಾರಣವಾಗಿ ಆತನೇ ಬಸವಣ್ಣನನ್ನು ಆಶ್ರಯಿಸಬೇಕಾಯಿತು. ಶರಣರು ಕೂಡ ಬಸವಣ್ಣನನ್ನು ಮಾತ್ರ ಮತ್ತೆ ಮತ್ತೆ ಹೊಗಳಿ ತಮ್ಮ ನಾಯಕನೆಂದು ಹೊಗಳಿ, ಹಾಡಿದರು. ಅಲ್ಲಮನಾಗಲಿ, ಸಿದ್ಧರಾಮನಾಗಲಿ ಮಡಿವಾಳಮಾಚಯ್ಯ, ಅಂಬಿಗರ ಚವುಡಯ್ಯ, ಸೊಡ್ಡಳ ಬಾಚರಸ ಇವರು ನಾಯಕರಾಗಲಿಲ್ಲ ಯಾಕೆಂದರೆ ಹಣ ಮತ್ತು ಅಧಿಕಾರ ಇಲ್ಲದ್ದು. ಹಣ ಮತ್ತು ಅಧಿಕಾರ ಮಾತ್ರವಲ್ಲದೆ ಬಸವಣ್ಣನಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಅವರಲ್ಲಿಲ್ಲದ ವಿನಯ, ಭಕ್ತಿಗಳು, ಅಪರಿಮಿತವಾಗಿ ಇದ್ದವು. ಶರಣರು ಬಂದರೆ ಗುಡಿ ತೋರಣ ಕಟ್ಟುವ, ಉಬ್ಬಿಕೊಬ್ಬಿ ನಲಿನಲಿದಾಡುವ ಭಾವತೀವ್ರತೆಗಳು ಬಸವಣ್ಣನಲ್ಲಿ ಮಾತ್ರ ಇದ್ದುವು. ಕಾತಕಳವೆಯಂತೆ ಆತ ಶರಣರಿಗೆಲ್ಲ ಬಾಗುತ್ತಿದ್ದ, ಗೌರವಿಸುತ್ತಿದ್ದ. ಏನಿ ಬಂದಿರೆ, ಹದುಳವಿದ್ದಿರೆ ಎಂದು ನುಡಿಸುವ ಅವನ ಸಂಭ್ರಮದ ನುಡಿಗಳು ಮಹಾ ಮನೆಗೆ ಬರುವ ಶರಣರಿಗೆ ಆಯಾಸದಲ್ಲಿ ಬಿಸಿಲಲ್ಲಿ ನಡೆದವನಿಗೆ ಪಾನಕ ಸಿಕ್ಕಿದಂತೆ. ಮುಖ್ಯ ಭಕ್ತಿ ವ್ಯಕ್ತವಾಗುವುದು ನಡೆ, ನುಡಿಯಲ್ಲಿ. ಆದರದ ಅದೂ ಊಟ, ಉಪಚಾರಗಳಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಈ ಶಕ್ತಿ ಭಸವಣ್ಣನಿಗಿತ್ತೇ ವಿನಾ ಇತರ ಯಾವ ಶರಣರಿಗೂ ಇರಲಿಲ್ಲ. ಬೇಡಿದ ಶರಣರಿಗೆ ಬೇಡಿದ್ದನ್ನೀಯುವ ಸಾಮರ್ಥ್ಯ ಇಲ್ಲದವನಲ್ಲಿ ಭಕ್ತರಾದರು ಯಾಕೆ ಸೇರುತ್ತಾರೆ. ಕೊನೆಪಕ್ಷ ಬಂದವನಿಗೆ ನಿಲ್ಲಲು ಸ್ಥಳ, ಊಟ, ವಸತಿ ಒದಗಿಸದಿದ್ದರೆ ಅವರು ಬರುವುದಾದರೂ ಹೇಗೆ ? ಬಸವಣ್ಣ ಇದಿಷ್ಟೇ ಅಲ್ಲದೆ ಇನ್ನು ಹೆಚ್ಚು ಕೊಟ್ಟು ತಗ್ಗಿ ಬಗ್ಗಿ ನಡೆದ. ಅವನ ವಿನಯ ಆತ ಅಪೇಕ್ಷಿಸಿ ತಂದುಕೊಂಡದ್ದು ನಿಜವೇ ಆದರೂ ಅದು ಶರಣರ ಆಂದೋಲನದ ಸಂದರ್ಭದಲ್ಲಿ ಅಗತ್ಯವಿತ್ತು.

12ನೇ ಶತಮಾನದ ವಚನಕಾರರ ಆಂದೋಲನ ಭೌಗೋಳಿಕವಾಗಿಮತ್ತು ಜನಾಂಗಿಕವಾಗಿ ಮಿತಿಯುಳ್ಳುಳಿಯಿತು. ಅದರ ಪ್ರಭಾವ ರಾಜಕೀಯ, ಆರ್ಥಿಕ ಕ್ಷೇತ್ರದಲ್ಲಿ ಹರಡುವ ಮುನ್ನವೇ ರಾಜ್ಯ ಅನಾಯಕವಾಯಿತು. ಒಂದು ಪಕ್ಷ ಬಸವಣ್ಣ ಬಿಜ್ಜಳನಿಗೆ ಸಮಾನವಾಗಿ ರಾಜಕೀಯ ಪ್ರತಿಸ್ಪರ್ಧಿಯಾಗಿದ್ದರೆ ಅದು ಪ್ರಾರಂಭದಲ್ಲಿಯೇ ರಕ್ತಪಾತವಾಗಿ ಮೊಟಕಾಗುತ್ತಿತ್ತು. ಬಿಜ್ಜಳನ ಕೊನೆಯ ದಿನಗಳಲ್ಲಿ ಬಸವಣ್ಣನೇನಾದರೂ ರಾಜಕೀಯ ಕ್ಷೇತ್ರವನ್ನು ವ್ಯಾಪಿಸಿಕೊಂಡಿದ್ದರೆ ಆತನ ಆಂದೋಲನ ವ್ಯಾಪ್ತಿ ಪಡೆಯುತ್ತಿತ್ತು. ಬುದ್ಧನಿಗೆ ಅಶೋಕ ಸಿಕ್ಕಿದಂತೆ ಮಾರ್ಕ್ಸ್‌ನಿಗೆ ಲೆನಿನ್ ಸಿಕ್ಕಿದಂತೆ ಬಸವಣ್ಣನಿಗೆ ಬೆಂಬಲಕೊಡುವ ಒಬ್ಬ ದಕ್ಷ ಚಕ್ರವರ್ತಿ ಸಿಗಲಿಲ್ಲ. ಆದರೂ ಬಿಜ್ಜಳನ ಸಹಕಾರ, ಸಹಾಯಗಳನ್ನು ಮರೆಯ್ಯು ವಂತಿಲ್ಲ. ಶರಣಧರ್ಮ ಅಧಿಕಾರ, ಹಣಗಳಿಗೆ ಬೆಲೆಕೊಡದಿದ್ದುದೇ ಅದರ ಮಿತಿಗೆ ಕಾರಣಆಯಿತು. ಅಲ್ಲದೆ ಬಿಜ್ಜಳನ ನಂತರ ಆದ ರಕ್ತಪಾತ, ಶರಣರಿಗೆ ಅಭದ್ರತೆ ಮತ್ತು ರಾಜ್ಯಕ್ಕೆ ಕುತ್ತು ಬಂದದ್ದರಿಂದ ವೀರಶೈವ ಧರ್ಮ ಹೆಚ್ಚು ವ್ಯಾಪಕ ಬೆಳೆಯಲು ಆಗಲಿಲ್ಲ.

ವಚನಕಾರರ ಆಂದೋಲನದೊಂದಿಗೆ ಮಾರ್ಟಿನ್‌ಲೂಥರ್, (ಪ್ರಾಟೆಸ್ಟೆಂಟಿಸಮ್), ಬೌದ್ಧಧರ್ಮ, ತಮಿಳು ಪುರಾತನರಿಗೆ ಮತ್ತು ಮಾರ್ಕ್ಸ್ ಲೆನಿನ್‌ರ ಆಂದೋಲನಗಳನ್ನು ಹೋಲಿಸುವ ಅಗತ್ಯವಾದರೂ ಏನು ? ಎಂದು ಪ್ರಶ್ನಿಸ ಬಹುದು. ಇವು ಒಂದೊಂದು ದೇಶದ ಬೇರೆ ಬೇರೆ ಕಾಲದ ಬೇರೆ ಬೇರೆ ಚರಿತ್ರೆಯ ಹಿನ್ನೆಲೆಯಲ್ಲಿ ಸಂಭವಿಸಿದವುಗಳು. ಇದರಲ್ಲಿ ಧರ್ಮದ ಪಾತ್ರ ಎಷ್ಟು ? ಆಂದೋ ಲನ ತಂದ ಸುಧಾರಣೆ ಎಷ್ಟು? ಸಾಮಾಜಿಕ ಕ್ಷೇತ್ರಸುಧಾರಣೆ ಎಷ್ಟು? ಚರಿತ್ರೆಯ ಪಾತ್ರ ಎಷ್ಟು ? ನಾಯಕರ ಪಾತ್ರ ಎಷ್ಟು ? ಅನುಯಾಯಿಗಳ ಪಾತ್ರ ಎಷ್ಟು?

ಹೀಗೆ ಅಧ್ಯಯನ ನಡೆಸುವುದರಿಂದ ಚರಿತ್ರೆಯ ಸ್ಫೋಟನೆ ಎಷ್ಟು? ನಾಯಕರ ಪಾಲು ಎಷ್ಟು? ಕಾಲಬರದಿದ್ದರೆ ನಾಯಕತೊಡಗಿಯೂ ಅದು ಹೇಗೆ ವಿಫಲವಾಗುತ್ತದೆ ಎಂಬುದು ವೇದ್ಯ ಆಗುತ್ತದೆ. ಅಲ್ಲದೆ ಧರ್ಮ ಆಂದೋಲನವನ್ನು ತರಬಲ್ಲುದೇ ಅಥವಾ ರಾಜಕೀಯ ಕ್ಷೇತ್ರ ಆಂದೋಲನ ತರಬಲ್ಲದೋ ? ಒಂದು ಪಕ್ಷ ಈ ಎರಡೂ ತರಲು ಸಮರ್ಥವಾಗಿದ್ದು ಅವುಗಳ ಮಿತಿ, ವ್ಯಾಪ್ತಿಗಳು ಅಧ್ಯಯನದಿಂದ ಅಂಗೈ ನೆಲ್ಲಿಯೆಷ್ಟು ಸ್ಪಷ್ಟವಾಗುತ್ತದೆ.

ಚಾರ್ಲ್ಸ್‌ಡಾರ್ವಿನ್ನನ ವಿಕಾಸವಾದ ಮನುಷ್ಯನ ಹುಟ್ಟು ಅಮೀಬದಿಂದ ಆರಂಭಗೊಂಡು ಮಂಗ, ಚಿಂಪಾಂಜಿ ಇತ್ಯಾದಿಯಾಗಿ ಮಾನವನ ಹಂತ ತಲುಪಿದೆ ಯೆಂಬ ಖಚಿತ ಅಧ್ಯಯನವನ್ನು ಮುಂದಿಟ್ಟಿದೆ. ಈ ಆಧಾರ ಸಹಿತ ಅಧ್ಯಯನ ಬೇಡ. ಬೈಬಲ್ಲಿನಂತೆ ಆಡಂ–ಈವರಿಂದ ಸೇಬಿನ ಹಣ್ಣು ತಿನ್ನುವುದರ ಮೂಲಕ ಪ್ರಪಂಚ ಆರಂಭವಾಯಿತೆಂದು ವಾದಿಸುವವರಿಗೆ ಅದು ಆಧಾರರಹಿತ ಎಂದು ಹೇಳುವುದನ್ನುಬಿಟ್ಟು ಬೇರೇನೂ ಎನ್ನಲು ಬರುವಂತಿಲ್ಲ. ಎನ್‌ಸೈಕ್ಲೊಪೀಡಿಯ ಕಾರರು, ಚರಿತ್ರಕಾರರು ಭಾರತದಲ್ಲಿನ ಆಂದೋಲನ, ಸುಧಾರಣೆಗಳನ್ನು ಹೆಸರಿಸು ವುದೇ ಇಲ್ಲ. ಪ್ರಾಟೆಸ್ಟೆಂಟ್ ತತ್ವದ ಸುಧಾರಣೆಯನ್ನು ರೆಫರ್‌ಮೇಷನ್ ಅಧ್ಯಾ ಯದಲ್ಲಿ ಹೇಳಿ ಕೈ ತೊಳೆದುಕೊಳ್ಳುತ್ತಾರೆ. ಭಾರತದ ಚರಿತ್ರೆಯಲ್ಲಿ ಅದಕ್ಕೆ ಸಮಾನವಾದ ಆಂದೋಲನ, ಸುದಾರಣೆಗಳು ನಡೆದಿವೆ ಎಂಬುದನ್ನು ತಿಳಿಸುವ ಅಗತ್ಯ ಆಗಬೇಕಿದೆ. ಆ ದಿಸೆಯಲ್ಲಿ ಈ ಅಧ್ಯಯನವೂ ಒಂದು ಒಳ್ಳೆಯ ಪ್ರಯತ್ನವಾದೀತು.

## ವಿವಿಧ ಆಂದೋಲನಗಳ ಪರಿಚಯ

**ಬೌದ್ಧ ಧರ್ಮ** : ಬುದ್ಧನ ಜೀವಿತ ಕಾಲದ ಬಗೆಗೆ ಅಪಾರವಾದ ಚರ್ಚೆ ನಡೆದಿದೆ. ಅವನ ಹುಟ್ಟು, ಕುಲ ಜೀವನದಿಂದ ಹಿಡಿದು ಅವನ ಜೀವಿತಾವಧಿಯ ವರೆಗೆ ಅನೇಕ ರೀತಿಯಲ್ಲಿ ವೈಭವಿಸಲಾಗಿದೆ. ಜಾತಕ ಕಥೆಗಳು, ಶಿಲ್ಪಗಳು ಇವೆಲ್ಲ ವೈಭವಿಸುವಿಕೆಯ ದಿಸೆಯಲ್ಲಿ ಮೂಡಿ ಬಂದವುಗಳು. ಬುದ್ಧನ ತತ್ವ, ಜೀವನಕ್ಕೆ ಮಾರುಹೋಗಿ ಅವನ ತತ್ವಗಳನ್ನು ಆಳವಾಗಿ ಅಧ್ಯಯನ ಮಾಡಿದ ಧರ್ಮಾನಂದ ಕೋಸಂಬಿಯವರ ಭಗವಾನ್‌ಬುದ್ಧ ಆಧರಿಸಿ ಕಾಲವನ್ನು ಇಲ್ಲಿ ಕೊಡಲಾಗುವುದು. ಅವರ ನಿರ್ಣಯ ಹೀಗಿದೆ. "ಮಹಾವಂಸ ಮತ್ತು ದೀಪ ವಂಸಗಳಲ್ಲಿ ಕೊಟ್ಟ ಪರಿನಿರ್ವಾಣದ ತಿಥಿಯೆ ಯೋಗ್ಯವಾದದ್ದೆನ್ನಿಸುತ್ತದೆ. ಬುದ್ಧನ ಪರಿನಿರ್ವಾಣಕ್ಕೆ ಈ ತಿಥಿಯನ್ನು ಗೃಹೀತವಾಗಿಟ್ಟುಕೊಂಡರೆ ಬುದ್ಧನ ಜನ್ಮವು ಕ್ರಿ. ಶ. ಪೂರ್ವ 23ನೆಯವರ್ಷ ಆಯಿತೆಂದು ಹೇಳಬೇಕಾಗುವುದು.[2] ಬೌದ್ಧಧರ್ಮ ಬುದ್ಧನಿಂದ ಉದಯವಾಗಿದ್ದರಿಂದ ಬುದ್ಧನ ಜೀವನ ಚರಿತ್ರೆ ಯನ್ನೇ ಸಾರಸಂಗ್ರಹವಾಗಿ ಕೊಡಲಾಗುವುದು.

---

2. ಧರ್ಮಾನಂದ ಕೋಸಂಬಿ : ಭಗವಾನ್ ಬುದ್ಧ, ಪುಟ 98.

**ಬುದ್ಧನ ಸಾಧನೆ, ತಪಸ್ಸು :**

ಬುದ್ಧ ಗೃಹವನ್ನು ಬಿಡುವ ಮುಂಚೆಯೇ ಕಪಿಲವಸ್ತುವಿನಲ್ಲಿದ್ದ ಕಾಲಾಮನ ಆಶ್ರಮದಲ್ಲಿ ಧರ್ಮ, ಆಧ್ಯಾತ್ಮದ ಬಗ್ಗೆ ತಿಳಿವಳಿಕೆ ಪಡೆದುಕೊಂಡಿದ್ದ. ಆತ ಗೃಹತ್ಯಾಗ ಮಾಡಿದ ಮೇಲೆ ನೇರವಾಗಿ ಎಲ್ಲಿಗೆ ಬಂದನೆಂಬ ಸಂಗತಿ ಸ್ಪಷ್ಟವಿಲ್ಲ. ಬುದ್ಧ ಮನೆ ಬಿಡುವ ಕಾಲಕ್ಕೆ 26 ವರ್ಷಗಳಾಗಿದ್ದುವೆಂದು ತಿಳಿದುಬರುತ್ತದೆ. ಆತನಿಗಿಂತ ಪೂರ್ವವಲ್ಲಿ ಜೈನ, ವೈತಿಕರಲ್ಲಿ ಕೆಲವು ದರಿದ್ರವಾದ ಆಚರಣೆಗಳಿದ್ದವು. 1) ವಿಷಯಲೋಲುಪತೆಯಲ್ಲಿ ಸುಖವಿದೆ ಎಂದು ತಿಳಿದಿದ್ದರು. 2) ಶರೀರದಂಡನೆಯನ್ನು ಅಗತ್ಯ ಎಂದು ಭಾವಿಸಿದ್ದರು. ಇದರಿಂದ ಪ್ರಭಾವಿತನಾದ ಬುದ್ಧ ಶರೀರದಂಡನೆಯನ್ನು 12 ವರ್ಷಗಳ ತಪಸ್ಸಿನ ಅವಧಿಯಲ್ಲಿ ಮಾಡುತ್ತಾ ಬಂದ. ಊಟವನ್ನು ದೇಹ ಬದುಕುವಷ್ಟಾದರೂ ತೆಗೆದುಕೊಳ್ಳುತ್ತಿರಲಿಲ್ಲ. ಇನ್ನು ಬದುಕುವುದು ಅಗತ್ಯ ಅದಕ್ಕಾಗಿ ಆಹಾರ ಸೇವಿಸಬೇಕು ಎಂದು ತಿಳಿದ. ಅದುವರೆಗೆ ಅವನ ಬಳಿ ಐವರು ಶಿಷ್ಯರಿದ್ದು ಈತ ಬುದ್ಧನಾದ ಮೇಲೆ ಅದನ್ನು ನಮಗೂ ತಿಳಿಸುವನೆಂದು ಸೇವೆಮಾಡುತ್ತಿದ್ದರು. ಆತ ಊಟಮಾಡಿದ ಮೇಲೆ ಅವರು ಬುದ್ಧ ವ್ರತಭ್ರಷ್ಟನಾದನೆಂದು ತಿರಸ್ಕರಿಸಿ ಹೊರಟುಹೋದರು. ಬಸವಣ್ಣ ಆಧ್ಯಾತ್ಮದ ಹಾದಿಯಲ್ಲಿ ತನ್ನ ಚಿತ್ತ ಹತ್ತಿಯಹಣ್ಣು ಎಂದೂ ಕಾಯವಿಕಾರ ಕಾಡಿಹುದು ಎಂದು ಹೇಳಿಕೊಂಡಿದ್ದಾನೆ. ಅಂತೆಯೇ ಅಲ್ಲಮ ಕೂಡ "ಗುಹೇಶ್ವರನ ವಿರಹದಲ್ಲಿ ಬೆಂದವರ ಮರಳಿ ಸುಡಲುಂಟೆ ಮರಳುಕಾಮ" ಎಂದು ಹೇಳಿದ್ದಾನೆ. ಸಾಧನೆಯ ಹಂತದಲ್ಲಿ ಇಂದ್ರಿಯ ವಿಜಯ ಪ್ರಾಥಮಿಕ ಹಂತ. ನಂತರ ಚಿತ್ತಸ್ಥಿರತೆ ಆ ಮೂಲಕ ತಪಸ್ಸು, ಸಂಯಮ ಜೀವನ.

ಭೋಧಿಸತ್ವನು ಏಳು ವರ್ಷ ತಪಶ್ಚರ್ಯೆಯನ್ನು ಮಾಡಿದನೆಂಬ ಉಲ್ಲೇಖವು ಅನೇಕ ಕಡೆ ದೊರೆಯುವುದು. ಈ ಏಳುವರ್ಷಕಾಲ ಬೋಧಿಸತ್ವನು ಮುಖ್ಯವಾಗಿ ದೇಹದಂಡನೆಯನ್ನು ಮಾಡುತ್ತಿದ್ದರೂ ಅವನಲ್ಲಿ ಬೇರೆ ವಿಚಾರಗಳು ಸುಳಿದಿದ್ದವು. ಆತ ಚಿತ್ತಸ್ಥಿರತೆಯನ್ನು ಕಾಯ್ದುಕೊಂಡು ಮುಂದುವರಿದ.[3] ಕಾಮೋಪಭೋಗದಿಂದ ಅಕುಶಲ ವಿಚಾರದಿಂದ ಅಲಿಪ್ತವಾದ ಸುಖಕ್ಕೆ ನಾನು ಯಾಕೆ ಹೆದರುತ್ತಿರುವೆ ? ಆ ಸುಖಕ್ಕೆ ಹೆದರಕೂಡದು ಎಂಬ ವಿಚಾರಕ್ಕೆ

3. ಧರ್ಮಾನಂದ ಕೋಸಂಬಿ : ಭಗವಾನ್ ಬುದ್ಧ, ಪುಟ 126 ; 127.

ತರುವಾಯ ಬಂದ. ಆದರೆ ಈ ರೀತಿ ದೇಹದಂಡನೆಯಿಂದ ದುರ್ಬಲವಾದ ಶರೀರದಿಂದ ಆ ಸುಖ (ಸತ್ಯದ ಆನಂದ)ವನ್ನೂ ದೊರಕಿಸಿಕೊಳ್ಳುವುದು ಶಕ್ಯವಿಲ್ಲ ಎಂದು ಮತ್ತು ಸಾಕಷ್ಟು ಅನ್ನವನ್ನು ತಿನ್ನುವುದೇ ಯೋಗ್ಯವಾಗಿದೆ.[4] ಎಂಬ ವಿಚಾರಕ್ಕೆ ಬಂದ.

ಬುದ್ಧನ ಸಾಧನೆಯೆಲ್ಲವೂ ನೈರಂಜನ ನದಿಯ ದಡದಲ್ಲಿ ನಡೆಯಿತೆಂದು ಸುತ್ತನಿಪಾತದ ಪದಾನಸುತ್ತದಲ್ಲಿ ಬಂದಿದೆ. ಅದರಲ್ಲಿ ಕಾಮನಥಾಳಿ ಆಗುತ್ತಿದ್ದುದನ್ನು ಬುದ್ಧ ನಿರೋಧಿಸಿದುದನ್ನು ಹೀಗೆ ಬರೆಯಲಾಗಿದೆ.

"1. ನೈರಂಜನ ನದಿಯ ದಡದಲ್ಲಿ ತಪಶ್ಚರ್ಯೆಯನ್ನಾರಂಭಿಸಿ ನಿರ್ವಾಣ ಪ್ರಾಪ್ತಿಗಾಗಿ ಬಹಳ ಉತ್ಸಾಹದಿಂದ ನಾನು ಧ್ಯಾನ ಮಾಡುತ್ತಿದ್ದಾಗ 2. ಮಾರನು ಕರುಣ ಸ್ವರದಿಂದ ನನ್ನ ಕಡೆ ಬಂದು ನುಡಿದನು. ನೀನು ಕೃಶನು, ದುರ್ವರ್ಣನೂ ಆಗಿರುವೆ. ಮರಣ ನಿನ್ನನ್ನು ಸಮೀಪಿಸಿದೆ. ನಿರ್ವಾಣ ಮಾರ್ಗವು ಅತ್ಯಂತ ಕಠಿಣ ಮತ್ತು ದುರ್ಗಮವಾದದ್ದು."[5] ಮನದಲ್ಲಿ ಆಗುವ ಈ ಆಲೋಚನೆಗಳನ್ನು ಚಿತ್ರಸ್ತವಾಗಿ ಹಿಡಿದಿಡುವ ಈ ಪ್ರಯತ್ನವನ್ನೂ ಬುದ್ಧ ಚರಿತದಲ್ಲಿ ಮಾಡಲಾಗಿದೆ. ಕಾವ್ಯ ಕಲ್ಪನೆಯ ಕುಂಚದಿಂದ ವಿವರವಾಗಿ ಇದನ್ನೂ ಬಿಡಿಸಲಾಗಿದೆ. ಬುದ್ಧ ಮಾರನಿಗೆ ಪ್ರತ್ಯುತ್ತರವಾಗಿ ಹೀಗೆ ಹೇಳುತ್ತಾನೆ. "9. ನದಿಯ ಪ್ರವಾಹವನ್ನೂ ಕೂಡ ಗಾಳಿಯು ಬತ್ತಿಸಬಹುದು. ಆದರೆ ಧ್ಯೇಯದ ಮೇಲೆ ಚಿತ್ತವನ್ನಿಟ್ಟ ನನ್ನ ರಕ್ತವನ್ನು ನೀನು ಶೋಷಿಸಲಾರೆ. 10. ನನ್ನ ಪ್ರಯತ್ನದಿಂದಲೇ ರಕ್ತ ಶೋಷಿತವಾದರೆ ನನ್ನ ಮಾಂಸ ಕ್ಷೀಣವಾದಾಗ ಚಿತ್ತವು ಇನ್ನೂ ಹೆಚ್ಚು ಪ್ರಸನ್ನವಾಗಿ, ಸ್ಮೃತಿ, ಪ್ರಜ್ಞೆ, ಸಮಾಧಿಗಳು ಉತ್ತರೋತ್ತರ ಬೆಳೆಯುವುವು. 11. ಈ ಪ್ರಕಾರ ಇದ್ದು ಉತ್ತಮ ಸುಖ ಲಭಿಸಿದಲ್ಲಿ ನನ್ನ ಚಿತ್ತವು ಕಾಮೋಪಭೋಗದತ್ತ ಒಲಿಯುವುದಿಲ್ಲ. ನೋಡು ಇದು ನನ್ನ ಆತ್ಮ ಶುದ್ಧಿ.[6] ಬುದ್ಧ ತಪಸ್ಸು ಮಾಡುವ ಕಾಲಕ್ಕೆ ಅವನ ಸಮಕಾಲೀನ ಸನ್ಯಾಸಿಗಳು ಸುರೆ, ಮಾಂಸ ಸ್ವೀಕರಿಸುತ್ತಿದ್ದಂತೆ ಈತ ಸ್ವೀಕರಿಸುತ್ತಿದ್ದಿಲ್ಲ. ಒಂದು ಅಥವಾ ಎರಡು ತುತ್ತನ್ನು ತಿಂದು

---

4. ಧರ್ಮಾನಂದ ಕೋಸಂಬಿ: ಭಗವಾನ್ ಬುದ್ಧ, ಪುಟ 115.
5. ಅದೇ, ಪುಟ 144.
6. ಅದೇ, ಪುಟ 145.

ಸಾಧನೆಯಲ್ಲಿ ಮುಂದುವರಿಯುತ್ತಿದ್ದ. ತಾನು ನಾಲ್ಕು ತರದ ತಪಸ್ಸನ್ನಾಚರಿಸುತ್ತಿದ್ದೆನೆಂದು ಹೇಳಿಕೊಂಡಿದ್ದಾನೆ. ನಾನು ತಪಸ್ವಿಯಾದೆ. ನಾನು ರೂಕ್ಷನಾದೆ. ನಾನು ಜಿಗುಪ್ಸಿಯಾದೆ. ನಾನು ಪವಿತ್ರನಾದೆ. ಬುದ್ಧನ ಯೋಗದ ಬಗ್ಗೆ ಈ ವಿವರ ಸಿಗುತ್ತದೆ." ಹೇ ಅಗ್ಗಿವೇಸ್ಸನಾ ನಾನು ಹಲ್ಲಿಗೆ ಹಲ್ಲು ಕಚ್ಚಿ ಚಿತ್ತದ ದಮನವನ್ನು ಮಾಡುತ್ತಿದ್ದೆ. ಆಗ ನನ್ನ ಬಗಲಿನಿಂದ ಬೆವರು ಸುರಿಯುವುದು. ಒಬ್ಬ ಗಟ್ಟಿಗ ಮನುಷ್ಯನು ದುರ್ಬಲನ ತಲೆಯನ್ನು ಇಲ್ಲವೆ ಭುಜವನ್ನು ಬಿಗಿದೊತ್ತುವಂತೆ ನಾನು ನನ್ನ ಚಿತ್ತವನ್ನು ಬಿಗಿದು ಹಿಡಿಯುತ್ತಿದ್ದೆ.[7] ಬುದ್ಧನು ತಪಸ್ಸಿನ ಫಲವಾಗಿ ಪಡೆದ ಜ್ಞಾನೋದಯವೆಂದರೆ ಪ್ರಪಂಚದಲ್ಲಿ ದುಃಖವಿದೆ ಅದನ್ನು ಗೆಲ್ಲಬೇಕು. ನಾನು ಮುಪ್ಪು, ರೋಗ, ಸಾವುಗಳನ್ನು ಸಮೀಪಿಸುವವನಾಗಿದ್ದೇನೆ. ಇವುಗಳಿಂದ ಪ್ರಿಯವಾದವರ ವಿಯೋಗವು ನನಗೆ ದುಃಖ ತರುತ್ತದೆ. ಇದರಿಂದ ಜಗತ್ತು ದುಃಖದ ಸಮುದಾಯದಿಂದ ಕೂಡಿದೆ. ಇದನ್ನು ಗೆಲ್ಲಲು ಆತ ದುಃಖ ನಿರೋಧವನ್ನು ತಿಳಿಸಿ ಅಷ್ಟಾಂಗಿಕ ಮಾರ್ಗವನ್ನು ಬೋಧಿಸುತ್ತಾನೆ.

ವೈಯಕ್ತಿಕ ಸಮಸ್ಯೆಗಳಿಗೆ ಉತ್ತರ ಕಂಡುಕೊಳ್ಳಲು ಹೊರಟ ಬುದ್ಧ ಜ್ಞಾನೋದಯವಾದ ಮೇಲೆ ಅದನ್ನು ಜಗತ್ತಿಗೆ ತಿಳಿಸಲು ಹೊರಟ. ತಾನು ಧರ್ಮಪ್ರಚಾರ ಮಾಡುತ್ತೇನೆಂದಾಗಲಿ, ಧರ್ಮ ಒಂದರ ಸಂಸ್ಥಾಪಕನಾಗುತ್ತೇನೆಂದಾಗಲಿ ಆತ ತಿಳಿದಿರಲಿಲ್ಲ. ಆತ ಆ ಹಾದಿಯಲ್ಲಿ ನಡೆಯುತ್ತಿದ್ದಂತೆ ಆತನ ದಾರಿ ಒಮ್ಮೆಲೆ ಗೋಚರವಾಯಿತು. ಬುದ್ಧನ ತತ್ವಗಳು ಅದುವರೆಗಿದ್ದ ಧರ್ಮದತತ್ವವನ್ನು ತಿರಸ್ಕರಿಸಿ ಹೊಸದಾಗಿ ಸಂಶೋಧಿಸಿದವುಗಳಾಗಿವೆ. ಆ ಮುಂಚೆ ಇದ್ದ ಧರ್ಮವೊಂದನ್ನು ಸಂಪೂರ್ಣವಾಗಿ ತಿರಸ್ಕರಿಸಿ ಹೊಸತಾದ ತತ್ವಗಳನ್ನು ಹೇಳುತ್ತ ಹೊರಟಂತೆ ಅವನ ಅನುಯಾಯಿಗಳ ಸಂಖ್ಯೆ ಹೆಚ್ಚಾಗತೊಡಗಿತು. ಅವನ ತತ್ವಗಳು ಧಾರ್ಮಿಕ ಆಂದೋಲನಕ್ಕೆ ಭದ್ರಬುನಾದಿ ಹಾಕಿದವು.

"ಭಿಕ್ಷುಗಳೆ ಧಾರ್ಮಿಕ ಮನುಷ್ಯನು ಎರಡು ಹಂತಗಳನ್ನು ಮುಟ್ಟಬಾರದು...ಕಾಮೋಪ ಭೋಗದಲ್ಲಿ ಸುಖವಿದೆ ಎಂದು ತಿಳಿಯುವುದು. ಇದು ಹೀನ, ಗ್ರಾಮ್ಯ, ಸಾಮಾನ್ಯ, ಅನಾರ್ಯ ಮತ್ತು ಅನರ್ಥಾವಹ ಅಂತವಾಗಿದೆ. ದೇಹದಂಡನೆ ಕೂಡದು. ಇದು ದುಃಖಕಾರಕ, ಅನಾರ್ಯ ಮತ್ತು ಅನರ್ಥಾ

---

7. ಧರ್ಮಾನಂದ ಕೋಸಂಬಿ: ಭಗವಾನ್ ಬುದ್ಧ, ಪುಟ 136.

ವಹವಾಗಿದೆ.......ಜ್ಞಾನಚಕ್ಷುವನ್ನು ಹುಟ್ಟಿಸುವುದಕ್ಕೆ.......ನಿರ್ವಾಣಕ್ಕೆ ಕಾರಣವಾಗಬಲ್ಲ ಮಧ್ಯಮ ಮಾರ್ಗವೊಂದನ್ನು ತಥಾಗತನು ಹುಡುಕಿದ್ದಾನೆ... ಅವು ಸಮ್ಯಕ್ ದೃಷ್ಟಿ, ಸಮ್ಯಕ್ ಸಂಕಲ್ಪ, ಸಮ್ಯಕ್ ಸಮಾಧಿ[8] ಇವು ಆ ಮಾರ್ಗಗಳಾಗಿವೆ.

1. ಪ್ರಾಣಿ (ಮನುಷ್ಯ)ಗೆ ಜನ್ಮ, ಮರಣ, ಅಪ್ರಿಯರ ಸಮಾಗಮ, ಪ್ರಿಯರ ವಿಯೋಗ ದುಃಖಕರವಾಗಿದೆ. ಮತ್ತೆ ಮತ್ತೆ ಹುಟ್ಟುವ ಆ ಮೂಲಕ ವಿಷಯ ಸುಖದಲ್ಲಿ ಮಗ್ನವಾಗುವುದರಿಂದ ಕಾಮತೃಷೆ, ಭವತೃಷೆ, ವಿನಾಶ ತೃಷೆಯ ದುಃಖಸಮುದಾಯ ಆವೃತವಾಗಿದೆ.

2. ವಿರಾಗದಿಂದ ಇದನ್ನು ಗೆಲ್ಲಬೇಕು. ಈ ದಿಸೆಯಲ್ಲಿ ದುಃಖವನ್ನು ನಿರೋಧಿಸುವುದು ಪ್ರಾಥಮಿಕ ಹಂತ. ಅಷ್ಟಾಂಗಿಕ ಮಾರ್ಗದಲ್ಲಿ ನಡೆದು ಭವಗೆಲ್ಲುವುದು ಸಾಧಕನ ಹಂತ.

ಬುದ್ಧಧರ್ಮದ ಗುರಿ ಶಾಂತಿ, ಪ್ರಜ್ಞೆ, ಸಂಬೋಧ, ನಿರ್ವಾಣ ಇವುಗಳನ್ನು ಪಡೆಯುವುದಾಗಿದೆ. ಇವು ನಾಲ್ಕು ಆರ್ಯಸತ್ಯಗಳು. ಬುದ್ಧ ಆತ್ಮ, ದೇವರ ಒಗ್ಗೆ ಚರ್ಚೆ ಅನಗತ್ಯ ಎನ್ನುತ್ತಾನೆ. ಆತ್ಮ ದೇವರು ಇದೆ ಅಥವಾ ಇಲ್ಲಎನ್ನುವುದರಿಂದ ಆರ್ಯಸತ್ಯಗಳು ದೊರೆಯುವುದಿಲ್ಲವೆಂದೂ ಪ್ರಪಂಚದ ದುಃಖ ಸಮುದಾಯವನ್ನು ಗೆಲ್ಲಲು ಇದರಿಂದ ಬಲವೇನೂದೊರೆಯುದೆಂದು ಆತ ತಿಳಿಸುತ್ತಾನೆ. ಆಸ್ತಿಕವಾದ ಹೇಳುವವರ ವಾದಗಳು ಹುರುಳಿಲ್ಲದವು ಎನ್ನುತ್ತಾನೆ. ಪೂರ್ವಜನ್ಮ, ಪುನರ್ಜನ್ಮದ ಬಗೆಯೂ ಇದೇ ಧೋರಣೆ ಇದೆ ಬುದ್ಧನಲ್ಲಿ. ಆತ ಇರುವ ಬದುಕನ್ನು ಸಮಸ್ಯೆಯನ್ನು ಕಂಡುಕೊಂಡು ಬದುಕಬೇಕೆಂದು ತಿಳಿದವನು. ಬುದ್ಧನ ತತ್ವಗಳು ಸರಳ ಮತ್ತು ನೇರ.

"ಸ್ವತಃ ಕೆಸರಿನಲ್ಲಿ ಸಿಕ್ಕಿ ಬಿದ್ದವನಿಗೆ ಕೆಸರಿನಲ್ಲಿ ಸಿಕ್ಕಿಬಿದ್ದ ಇನ್ನೊಬ್ಬನನ್ನು ಹೊರಗೆಳೆಯುವುದು ಶಕ್ಯವಾಗುವುದಿಲ್ಲ. ಅದರಂತೆಯೇ ಸ್ವಂತ ದಮನ, ಶಿಸ್ತು, ಶಾಂತ ಇರದವನು ಇನ್ನೊಬ್ಬನ ದಮನ, ಶಾಂತ, ಶಿಸ್ತು ಮಾಡುವ ಸಂಭವವಿಲ್ಲ. ಯಾವನು ಸ್ವತಃ ದಾಂತ, ವಿನೀತ, ಪರಿನಿವೃತ್ತ (ಶಾಂತ)

8. ಧರ್ಮಾನಂದ ಕೋಸಂಬಿ: ಭಗವಾನ್ ಬುದ್ಧ, ಪುಟ 153 ಮತ್ತು 154.

ಇರುವವನು ಇನ್ನೊಬ್ಬನಿಗೆ ವಿನಯ, ಶಾಂತವನ್ನು ಉಂಟುಮಾಡುವ ಸಂಭವವಿದೆ.[17] ಬುದ್ಧ ಮೊದಲು ತಾನು ಬುದ್ಧ ನಾಗುವುದರಲ್ಲಿ ನಂಬಿಕೆ ಯಿಟ್ಟವನು. ನಂತರ ಏನಿದ್ದರೂ ತಾನು ತಿಳಿದದ್ದನ್ನು ಸಂಸ್ಥಾಪಿ ಸಲು ತನ್ನ ಬದುಕನ್ನು ಮೀಸಲಿಟ್ಟ. ಆತ ಪ್ರಪಂಚವನ್ನು ಬಯಸಿದವನೂ ಅಲ್ಲ ತಿರಸ್ಕರಿಸಿದವನೂ ಅಲ್ಲ. ಸ್ವರ್ಗವನ್ನು ಅಪೇಕ್ಷಿಸಿದವನೂ ಅಲ್ಲ. ನಂಬಿ ದವನೂ ಅಲ್ಲ. ಭಿಕ್ಷುಗಳೆ ಪ್ರಪಂಚದ ಮತ್ತು ಸ್ವರ್ಗಪಾಶದಿಂದ ನಾನು ವಿಮು ಕ್ತನಾಗಿದ್ದೇನೆ. ನೀವು ಕೂಡ ಈ ಪಾಶದಿಂದ ಮುಕ್ತರಾಗಿರುವಿರಿ. ಆದ್ದರಿಂದ ಭಿಕ್ಷುಗಳೆ ಬಹುಜನರ ಹಿತಕ್ಕಾಗಿ, ಸುಖಕ್ಕಾಗಿ, ಜಗತ್ತಿನ ಮೇಲಿನ ಅನುಕಂಪ ಕ್ಕಾಗಿ ಮನುಷ್ಯ ಮತ್ತು ದೇವತೆಗಳ ಕಲ್ಯಾಣಕ್ಕಾಗಿ ಧರ್ಮೋಪದೇಶವನ್ನು ಮಾಡಲು ಪ್ರವೃತ್ತರಾಗಿರಿ. ಒಂದೇ ದಾರಿಗೆ ಇಬ್ಬರು ಹೋಗಬೇಡಿರಿ ಆರಂಭ, ಡುವೆ, ಕೊನೆಗೆ ಕಲ್ಯಾಣಪ್ರದವಾದ ಈ ಧರ್ಮವನ್ನು ಜನರಿಗೆ ಉಪದೇಶಿ ಸಿರಿ" ಹೀಗೆ ಹೇಳಿ ಸಾಧಕರ ಒಡನಾಟವನ್ನು ಒತ್ತಿಹೇಳಿದ. ಆಧ್ಯಾತ ಜೀವಿಗಳು ಕೂಡ ತಪಸ್ಸನ್ನು ಮತ್ತೆ ಮತ್ತೆ ಆಚರಿಸಬೇಕೆಂದು ಹೇಳಿದ. ಬುದ್ಧನ ತತ್ವಬೋಧೆ ಈ ಪ್ರಾರ್ಥನೆಯಲ್ಲಿದೆ.

ಬುದ್ಧಂ ಶರಣಂ ಗಚ್ಛಾಮಿ
ಧರ್ಮಂ ಶರಣಂ ಗಚ್ಛಾಮಿ
ಸಂಘಂ ಶರಣಂ ಗಚ್ಛಾಮಿ

ನೀವು ಬುದ್ಧ (ತಪಸ್ವಿಯಾದವ) ಧರ್ಮ ಮತ್ತು ಸಂಘ ಇವುಗಳ ಆಶ್ರ ಯದಲ್ಲಿದ್ದು ಸ್ವಂತದ ಪರಿಶ್ರಮದಿಂದ ನಿಮ್ಮ ಮತ್ತು ಮಿಕ್ಕವರ ದುಃಖವನ್ನು ನಾಶಮಾಡಿರಿ. ಜಗತ್ತಿನ ದುಃಖವನ್ನು ಕಡಿಮೆ ಮಾಡಿರಿ.[19] ಎಂದು ಹೇಳಿದ. ಧರ್ಮದ ತತ್ವಗಳನ್ನು ಜನರಿಗೆ ತಿಳಿಸುವಾಗ ಸಂಘರ್ಷ ಅನಿವಾರ್ಯ ಆಗುತ್ತದೆ. ಬೇರೊಂದು ಧರ್ಮದ ತತ್ವಗಳನ್ನು ಪೂರ್ಣ ನಿರಾಕರಿಸಲು ಜನರಿಗೆ ತಿಳಿಸಿದಾಗ ಅದನ್ನು ಒಪ್ಪದ ಮತ್ತು ಪರಧರ್ಮದ ನಿಷ್ಠಾವಂತ ಅನುಯಾಯಿಗಳು ವಿರುದ್ಧ ಆಗುತ್ತಾರೆ. ಈ ಸಂಘರ್ಷದಿಂದಾಗಿ ಬುದ್ಧಧರ್ಮ ಮತ್ತೆ ಮತ್ತೆ ತನ್ನ ಪಥ ದಲ್ಲಿ ಮುಂದುವರಿಯಬಯಸಿತು. ಆಂದೋಲನದ ಸ್ವರೂಪ ಪಡೆಯಿತು.

17. ಧರ್ಮಾನಂದ ಕೋಸಂಬಿ: ಭಗವಾನ್ ಬುದ್ಧ, ಪುಟ 243.
18. ಅದೇ, ಪುಟ 165.
19. ಅದೇ, ಪುಟ 166.

ಬುದ್ಧನೇ ಒಂದುಕಡೆ ಜನರು ತನ್ನ ಅನುಯಾಯಿಗಳು ಯಾಕೆ ಆಗುತ್ತಾರೆಂಬುದಕ್ಕೆ ಉತ್ತರ ಕೊಟ್ಟಿದ್ದಾನೆ. "ಶ್ರಮಣ ಗೋತಮನು ಶೀಲವಂತನಾಗಿದ್ದಾನೆ. ಅವನು ಯಥಾರ್ಥವಾಗಿ ಧರ್ಮೋಪದೇಶ ಮಾಡುತ್ತಾನೆ. ಪ್ರಜ್ಞಾವಂತನಾಗಿದ್ದಾನೆ.ಅದಕ್ಕಾಗಿ ನನ್ನ ಶ್ರಾವಕರು ನನಗೆ ಮಾನವನ್ನು ಕೊಡುತ್ತಾರೆ. ಮತ್ತು ನನ್ನ ಆಶ್ರಯದಲ್ಲಿಇರುತ್ತಾರೆ. ಅದಲ್ಲದೆ ನಾನು ನನ್ನ ಶ್ರಾವಕರಿಗೆ ನಾಲ್ಕು ಆರ್ಯಸತ್ಯಗಳ ಉಪದೇಶವನ್ನು ಮಾಡುತ್ತೇನೆ. ಆಧ್ಯಾತ್ಮಿಕ ಉನ್ನತಿಯ ಬೇರೆ ಬೇರೆ ಪ್ರಕಾರಗಳನ್ನು ತೋರಿಸುತ್ತೇನೆ."[20] ಇದರಿಂದ ಬುದ್ಧನ ನಡೆಯಿಂದಾಗಿ, ತತ್ವದಿಂದಾಗಿ ಜನರು ಮಾನ್ಯಮಾಡುವರೆಂದು ತಿಳಿದು ಬರುತ್ತದೆ. ಅಲ್ಲದೆ ಬುದ್ಧ ಜಾತಿ, ಕುಲಗಳಿಗೆ ಮನ್ನಣೆ ನೀಡಿದವನಲ್ಲ. ಭಿಕ್ಷುಗಳಲ್ಲಿ ತಾರತಮ್ಯ ಮಾಡಿದವನಲ್ಲ. ಸಾಮೂಹಿಕ ಸಾಮರಸ್ಯವನ್ನು ಕಾಪಾಡಿಕೊಂಡು ಬಂದನು. ಧ್ಯಾನ ಬೋಧಿಸತ್ವನಿಗೂ ಅಗತ್ಯವಿತ್ತು. ಇದರಿಂದ ಮತ್ತೆ ಮತ್ತೆ ಧರ್ಮ, ತತ್ವಗಳು ಆಚರಣೆಯಲ್ಲಿ ಬರುವುದಕ್ಕೂ ಪ್ರಚಾರವಾಗುವುದಕ್ಕೂ ಅವಕಾಶವಾಯಿತು. ಪ್ರಾರ್ಥನೆ, ಬೋಧನೆಗಳು ಸಂಘಟನೆಯ ಮೂಲ ಆದವು. ಮುಖ್ಯವಾಗಿ ಬುದ್ಧನ ಧರ್ಮ ಆತನಿಂದಲೇ ಹೊಸದಾಗಿ ರೂಪಿತವಾಯಿತು. ಹಳೆಯ ಹುಸಿಮೌಲ್ಯಗಳನ್ನು ಪೂರ್ಣ ತಿರಸ್ಕರಿಸಿದ್ದು ಆಂದೋಲನದ ಪೂರ್ವಘಟ್ಟವಾದಂತೆ ಹೊಸ ತತ್ವಗಳನ್ನು ಸಂವಹನಮಾಡುತ್ತಾ ಹೋದದ್ದು ಆಂದೋಲನದ ಸಂಘಟನೆಯಾಯಿತು. ನಂತರ ಇದು ವ್ಯಾಪಕವಾಗುತ್ತ ರಾಜರುಗಳ ಮೇಲೆಯೂ ಪ್ರಭಾವ ಬೀರಿ ಅವರನ್ನು ಬುದ್ಧಧರ್ಮದ ಪರಿಧಿಯೊಳಗೆ ತೆಗೆದುಕೊಳ್ಳುವುದರ ಮೂಲಕ ಆಂದೋಲನವಾಗಿ ಕಂಡುಬಂತು.

ಬುದ್ಧ ಯಾವತ್ತು ತಾನು ನಾಯಕನಾಗಲು ಬಯಸಿದವನಲ್ಲ. ತನ್ನದೇ ಕೊನೆಯ ಮಾತೆಂದು ಹೇಳಿದವನೂ ಅಲ್ಲ. ಎಲ್ಲ ಬಿಟ್ಟು ಸರ್ವಸಂಗ ಪರಿತ್ಯಾಗಿಯಾದವನಿಗೆ ಇತ್ತಲ ಯಾವ ಆಮಿಷಗಳೂ ಎಳೆದುಕೊಳ್ಳಲಿಲ್ಲ. ಗೋತಮ ಬೋಧಿಸತ್ವನಾಗಿ ವಾರಣಾಸಿಯ ಋಷಿ ಪತ್ತನಕ್ಕೆ ಬಂದಾಗ ಕೌಂಡಿನ್ಯ ಮೊದಲು ಆ ಬೌದ್ಧಧರ್ಮಸ್ವೀಕಾರ ಮಾಡಿದ. ನಂತರ ಬಾಪ್ಪ, ಭದ್ರಿಕ, ಮಹಾನಾಮ, ಅಶ್ವಜಿತ್ ಈ ನಾಲ್ವರು ಸ್ವೀಕಾರಮಾಡಿದರು. ಯಶ, ವಿಮಲ, ಸುಬಾಹು, ಪೂರ್ಣಜಿತ್, ಗವಂಪತಿ ಹೀಗೆ ಭಿಕ್ಷುಗಳ ಸಂಖ್ಯೆ ಐದರಿಂದ ಹತ್ತಕ್ಕೆ, ಹತ್ತರಿಂದ

20. ಧರ್ಮಾನಂದ ಕೋಶಂಬಿ: ಭಗವಾನ್ ಬುದ್ಧ, ಪುಟ 330.

60ಕ್ಕೆ ಬೆಳೆಯುತ್ತಾ ಹೋಯಿತು. ಉರುವೇಲದಲ್ಲಿ ಉರುವೇಲ ಕಾಶ್ಯಪ, ನದೀ ಕಾಶ್ಯಪ, ಗಯಾಕಾಶ್ಯಪ ಜಟಾಧಾರಿಗಳು ರಾಜಗೃಹದಲ್ಲಿ ಸಾರಿಪುತ್ತ ಮತು ಮೋಗ್ಗಲ್ಲಾನ ಪರಿವ್ರಾಜಕರು ಶಿಷ್ಯರಾದರು. ಇವರಲ್ಲಿ 1) ಬಿಕ್ಷು 2)ಭಿಕ್ಷುಣಿ 3) ಉಸಾಸಕ 4) ಉಪಾಸಿಕೆ ಎಂಬ ವರ್ಗೀಕರಣವಾಯಿತು. ಈ ಅನುಯಾಯಿಗಳ ಮೂಲಕ ಬುದ್ಧಧರ್ಮ ಪ್ರಚಾರಪಡೆಯಿತು. ಬುದ್ಧಧರ್ಮ ಪ್ರಚಾರದಲ್ಲಿ ಬುದ್ಧನಷ್ಟೇ ಪಾತ್ರ ಅವರ ಅನುಯಾಯಿಗಳದ್ದು ಇದೆ. ಜೊತೆಗೆ ರಾಜನ ಮೇಲೂ ಪ್ರಭಾವವಾಗಿ ರಾಜಕೀಯ ಬೆಂಬಲಪಡೆಯಿತು. ದೇಶದಾದ್ಯಂತ ಬೆಳೆದು ತನ್ನ ಕ್ಷೇತ್ರ ವಿಸ್ತಾರ ಮಾಡಿಕೊಂಡಿತು. ಬುದ್ಧನ ಕೊನೆಯ ದಿನಗಳಲ್ಲಿ ಒಟ್ಟು 500 ಭಿಕ್ಷುಗಳಿದ್ದರು. ಈ ಭಿಕ್ಷುಗಳಿಂದಾಗಿಯೇ ನಂತರ ಹೊರ ದೇಶಗಳಲ್ಲೂ ಹರಡಿತು. ಸಾಹಿತ್ಯ, ಕಲೆ, ಸಮಾಜ, ರಾಜಕೀಯ ಕ್ಷೇತ್ರಗಳಲ್ಲೆಲ್ಲಾ ಇದರ ಪ್ರಭಾವ ಬೆಳೆಯಿತು.

ಬುದ್ಧನಿಗೆ ಮುಂಚೆ ಹೆಸರಾದ ಶ್ರಮಣ ಸಂಘಗಳಿದ್ದವು.

1. ಪೂರಣ ಕಾಸ್ಸಪ
2. ಮಕ್ಖಲಿ ಗೋಪಾಲ
3. ಅಜಿತ ಕೌಸಂಬಲ
4. ಪಕುಧ ಕಚ್ಚಾಯನ
5. ಸಂಜಯ ಬೇಲಟ್ಠಪುತ್ತ
6. ನಿಗಂಠನಾಥ ಪುತ್ತ

ಈ ಆರು ಸಂಘಗಳ ಕೆಲವು ಅನುಯಾಯಿಗಳು ಬುದ್ಧನ ಶಿಷ್ಯರಾದರು. ಅಲ್ಲದೆ ಈ ಶ್ರಮಣ ಸಂಘಗಳು ಮಾಡುವ ಕಾರ್ಯಕ್ಕಿಂತ ಬುದ್ಧನ ಸಂಘಗಳು ಹೆಚ್ಚು ಕೆಲಸಮಾಡಿದವು. ಈ ಆರು ಅಚಾರ್ಯರು ಬುದ್ಧನಿಗಿಂತ ಹಿರಿಯರು ಅಷ್ಟೆ ಅಲ್ಲ ಅವರ ಭಿಕ್ಷುಸಂಖ್ಯೆಯೂ ಹೆಚ್ಚಾಗಿತ್ತು. ಹೀಗಿದ್ದರೂ ಬುದ್ಧನ ಧರ್ಮವೇ ಖ್ಯಾತವಾಯಿತು. "ಆರು ಶ್ರಮಣ ಸಂಘಗಳು ಸಂಖ್ಯೆಯಿಂದ ದೊಡ್ಡವಾಗಿದ್ದರೂ ಸಾಮಾನ್ಯ ಜನಸಮುದಾಯದ ಬಗ್ಗೆ ಅವರು ಯೋಚಿಸುತ್ತಿರಲಿಲ್ಲ. ಅವುಗಳೆಲ್ಲ ಹೆಚ್ಚಾಗಿ ತಪಶ್ಚರ್ಯೆಯ ಮಾರ್ಗದಿಂದ ಮೋಕ್ಷದೊರಕಿಸಿಕೊಳ್ಳುವ ಧ್ಯೇಯ ಉಳ್ಳವಾಗಿದ್ದವು. ಗ್ರಾಮದಲ್ಲಿ ಇಲ್ಲವೇ ನಗರದಲ್ಲಿ ಹೋಗಿ ಗೃಹಸ್ಥರಿಂದ ಭಿಕ್ಷೆಯನ್ನು ತೆಗೆದುಕೊಂಡು ಪ್ರಸಂಗೋಪಾತ್ತವಾಗಿ

ತಮ್ಮ ತತ್ವಜ್ಞಾನವನ್ನು ಕಲಿಸುತ್ತಿದ್ದವು. ಆದರೂ ಅವು ಗೃಹಸ್ಥರ ಹಿತ ಸುಖಗಳಿಗೆ ವಿಶೇಷ ಪ್ರಯತ್ನವನ್ನು ಮಾಡುತ್ತಿರಲಿಲ್ಲ"[21] ಬೌದ್ಧ ಸಂಘ ಜನರ ಹಿತಕ್ಕಾಗಿ ನಾಲ್ಕುದಿಕ್ಕಿಗೆ ಹೋಗಿ ಜನರಲ್ಲಿ ತತ್ವವನ್ನು ಪ್ರಚಾರಮಾಡಿ ಯಶಸ್ವಿಯಾಗುತ್ತಿದ್ದರು. ಬೌದ್ಧ ಭಿಕ್ಷುಗಳ ಉತ್ಸಾಹದ ಚಟುವಟಿಕೆ ಧರ್ಮಪ್ರಚಾರವಾಗಲು ಸಹಾಯ ಆಯಿತು.

ಕೆಲವರು ಬುದ್ಧನನ್ನು ಅವನ ತತ್ವಗಳನ್ನು ಅಲ್ಲಗಳೆಯುತ್ತಿದ್ದರು. ಆತನ ಸಂಬಂಧಿಕರಾಗಿದ್ದ ಆತನ ತಂದೆಯ ಶತ್ರುಗಳಾಗಿದ್ದ ನದಿಯ ನೀರಿಗಾಗಿ ಬಡಿದಾಟ ಮಾಡುತ್ತಿದ್ದ ಜನಗಳು ಈತನೇನು ಮಹಾ ಎಂದು ಅವಗಣಿಸಿ ಕಾಣುತ್ತಿದ್ದರು. ಅವಹೇಳನ ಮಾಡುತ್ತಿದ್ದರು. ಆಡಿ ಬೆಳೆದ ಹುಡುಗನ ಚಿತ್ರ ಕಣ್ಣ ಮುಂದೆ ಇದ್ದಿತೇ ಹೊರತು ಆತ ಸದ್ಯ ಏನು ಆಗಿದ್ದಾನೆ ಎಂಬುದರತ್ತ ಅವರ ಲಕ್ಷ್ಯ ಇರಲಿಲ್ಲ. ಬುದ್ಧನನ್ನು ಇತರ ಧರ್ಮೀಯರೂ ಅಲ್ಲಗಳೆಯುತ್ತಿದ್ದರು. ಕೆಲ ಗೃಹಸ್ಥರೂ ಅಲ್ಲಗಳೆಯುತ್ತಿದ್ದರು. ಯಾಕೆಂದರೆ ಬುದ್ಧ ಗೃಹಸ್ಥಾಶ್ರಮದ ಲೋಲುಪತೆಯನ್ನು ಅಲ್ಲಗಳೆಯುತ್ತಿದ್ದ, ಸನ್ಯಾಸಿಗಳ ದೇಹ ದಂಡನೆಯನ್ನು ನಿಷೇಧಿಸುತ್ತಿದ್ದ. ಅಲ್ಲದೆ ಬೌದ್ಧ ಧರ್ಮದ ಪ್ರಾಬಲ್ಯದಿಂದಾಗಿ ಇತರ ಧರ್ಮಗಳು ಇಳಿಗಾಲದಲ್ಲಿದ್ದುವು. ಇದರಿಂದ ಪರಧರ್ಮೀಯರು ದೂಷಿಸುವುದು ಸಹಜವೇ ಆಗಿದೆ. ಅಲ್ಲಮ ಒಂದು ಕಡೆ 'ತನಗೆ ತಾನೇ ಗುರುವಲ್ಲದೆ ಗುರುವೆನಲುಂಟೆ ಶಿಷ್ಯಂಗೆ ಶಿಷ್ಯನೆಂದೆನಲುಂಟೆ ಗುರುವಿಂಗೆ' ಎನ್ನುತ್ತಾನೆ. ಹಾಗೆ ಬುದ್ಧ ಕೂಡ ಹೇಳಿದ್ದಾನೆ. ತನ್ನ ಕೊನೆಯ ದಿನಗಳಲ್ಲಿ ತನ್ನ ಶಿಷ್ಯರನ್ನು ಕುರಿತು "ನೀವು ನಿಮ್ಮನ್ನೇ ಅವಲಂಬಿಸಿ ಇರಿ. ಆತ್ಮವು ದ್ವೀಪವಾಗಲಿ. ಧರ್ಮವು ದ್ವೀಪವಾಗಲಿ. ಆತ್ಮನಿಗೆ ಶರಣು ಹೋಗಿರಿ. ಧರ್ಮಕ್ಕೆ ಶರಣು ಹೋಗಿರಿ" [22] ಎಂದು ಹೇಳಿದ. ಇಲ್ಲಿ ಬುದ್ಧ ವಿಚಾರ ಸ್ವಾತಂತ್ರ್ಯಕ್ಕೆ ತುಂಬ ಮಹತ್ವ ಕೊಟ್ಟಿದ್ದಾನೆ. ನನ್ನ ತತ್ವದಂತೆ ನೀವು ನಡೆಯಿರಿ ಎಂದು ಯಾವತ್ತೂ ಆತ ಭೋಧಿಸಲಿಲ್ಲ. ಸಾಮಾನ್ಯವಾಗಿ ಯಾವುದೇ ಆಂದೋಲನ ಸುಸಂಘಟಿತ ಯೋಜನೆಯಿಂದ, ಆಚರಣೆಗಳಿಂದ ಮುಂದುವರಿಯುತ್ತದೆ. ಆದರೆ ಇಲ್ಲಿ ಬುದ್ಧನ ಈ ಉದಾರವಾದೀ ಧೋರಣೆಯೋ ಅವನ

21. ಧರ್ಮಾನಂದ ಕೋಸಂಬಿ: ಭಗವಾನ್ ಬುದ್ಧ, ಪುಟ 172-173.
22. ಅದೇ, ಪುಟ 338.

ಶಿಷ್ಯರ ಮನ ಗೆಲ್ಲಲು ಸಹಾಯಕ ಆಯಿತು. ಅದರಿಂದಲೇ ಬುದ್ಧನ ಕೊನೆಯ ದಿನಗಳಲ್ಲಿ ಕೇವಲ 500 ಭಿಕ್ಷುಗಳೇ ಇದ್ದರೂ ಮುಂದೆ ಅದು ಪ್ರಬಲ ಧರ್ಮವಾಗಿ ರಾಷ್ಟ್ರ ವ್ಯಾಪ್ತಿ ಆಯಿತು.

ಬುದ್ಧನ ಈ ಉದಾರವಾದಿ ಧೋರಣೆಗೆ ಇನ್ನು ಪ್ರಬಲ ಉದಾಹರಣೆಯೊಂದಿದೆ. "ನನ್ನ ಧರ್ಮವನ್ನು ನಾನು ಬಿಚ್ಚಿ ಹೇಳಿದ್ದೇನೆ. ಅದರ ಗುಟ್ಟನ್ನು ಇಟ್ಟುಕೊಂಡಿಲ್ಲ. ಯಾವನಿಗೆ ತಾನು ಭಿಕ್ಷು ಸಂಘದ ನಾಯಕನಾಗಿ ಉಳಿಯಬೇಕೋ ಮತ್ತು ಭಿಕ್ಷು ಸಂಘವು ತನ್ನ ಮಾತನ್ನು ಅವಲಂಬಿಸಿಕೊಂಡು ಇರಬೇಕು ಎನ್ನಿಸುವುದೋ ಅವನೇ ಭಿಕ್ಷು ಸಂಘಕ್ಕೆ ಕೊನೆಯ ಮಾತುಗಳನ್ನ ಹೇಳಬಲ್ಲನು. ಆದರೆ ಹೇ ಆನಂದ ತಥಾಗತನಿಗೆ ಭಿಕ್ಷು ಸಂಘದ ನಾಯಕನಾಗುವ, ಇಲ್ಲವೇ ಭಿಕ್ಷು ಸಂಘವು ತನ್ನನ್ನು ಅವಲಂಬಿಸಿ ಇರಬೇಕು ಎನ್ನುವ ಇಚ್ಛೆ ಇಲ್ಲ. ಹೀಗಿರುವಾಗ ತಥಾಗತನು ಭಿಕ್ಷು ಸಂಘಕ್ಕೆ ಕೊನೆಯದಾಗಿ ಯಾವ ಮಾತುಗಳನ್ನು ಹೇಳುವನು"[23] ಬುದ್ಧ ಯಾವತ್ತೂ ತನ್ನ ನಾಯಕತ್ವಕ್ಕೆ ಹಾತೊರೆದವನಲ್ಲ. ಬಹುಶಃ ಆಂದೋಲನದ ಎಲ್ಲ ಇತಿಹಾಸಗಳೂ ಹೀಗೆಯೇ ಇವೆ. ಬಸವಣ್ಣನಾಗಲೀ ಲೆನಿನ್ ಆಗಲಿ ತಾವು ನಾಯಕರಾಗಬೇಕೆಂದು ಬಯಸಿದವರಲ್ಲ. ಈ ಬಗ್ಗೆ ತುಲನಾತ್ಮಕ ಅಧ್ಯಯನ ಮುಂದೆ ಬರುತ್ತದೆ.

ಅಜಾತ ಶತ್ರುವಿನ ಮಿತ್ರನಾದ ದೇವದತ್ತ ಭಿಕ್ಷು ಸಂಘವನ್ನು ಒಡೆದ. ತನಗೆ ನಾಯಕತ್ವ ಬೇಕೆಂದು ತಹತಹಿಸಿದ. ಸಿಗದಾಗ ಸಂಘ ಇಬ್ಭಾಗವಾಗಲು ಕಾರಣ ಆದ ಕೌಶಾಂಬಿಯಲ್ಲಿ ಅನುರುದ್ಧ ಮತ್ತು ಸಾರಿಪುತ್ರಮೋಗ್ಗಲ್ಲಾನರ ನಡುವೆ ಜಗಳ ಸಂಭವಿಸಿದಾಗ ಬುದ್ಧನೇ ಪರಿಹರಿಸಿದ. ಸೂರ್ಯ ಇರುವವರೆಗೆ ಕತ್ತಲು ಇರದಂತೆ ಬುದ್ಧ ಇರುವವರೆಗೆ ಒಡಕು ಉಂಟಾಗಲಿಲ್ಲ. ಸೂರ್ಯನಿದ್ದರೂ ಮೋಡದಿಂದಾಗಿ ಮಬ್ಬು ಕವಿಯುವಂತೆ ಅನುಯಾಯಿಗಳಲ್ಲಿ ಅರೆಜ್ಞಾನದಿಂದಾಗಿ ಮಬ್ಬು ಆವರಿಸಿತ್ತು.

ಬುದ್ಧ ಧರ್ಮ ಬುದ್ಧನಿಂದ ರೂಪಧಾರಣ ಪಡೆದು ಅವನ ಅನುಯಾಯಿಗಳಿಂದ ಅಶೋಕನಂತಹ ರಾಜರುಗಳಿಂದ ರಾಜಕೀಯ ಬೆಂಬಲಪಡೆದು ವ್ಯಾಪಕ ಬೆಳವಣಿಗೆ ಪಡೆಯಿತು. ಸಾಮಾಜಿಕ ಅಂತಸ್ತುಗಳು

23. ಅದೇ, ಪುಟ 338.

ಆರ್ಥಿಕವಾಗಿ ಬದಲಾವಣೆ ಹೊಂದಲಿಲ್ಲವಾದರೂ ಅದು ಯುದ್ಧದ ಸಂದರ್ಭದಲ್ಲಿ ಪ್ರಮುಖ ಪಾತ್ರ ವಹಿಸಿತು. ಸುಲಿಗೆ, ದೌರ್ಜನ್ಯ, ದಬ್ಬಾಳಿಕೆಯನ್ನು ಮೆದು ಮಾಡಿತು.

**ತ್ರಿಷಷ್ಠಿ ಪುರಾತನರು**

ಇವರು ಅರವತ್ತು ಮೂವರು ಪುರಾತನರೆಂದೇ ಪ್ರಸಿದ್ಧರಾಗಿದ್ದಾರೆ. ಇಲ್ಲಿನ ವ್ಯಕ್ತಿಗಳು ನಾಲ್ಕನೆಯ ಶತಮಾನದಿಂದ ಹಿಡಿದು 10ನೆಯ ಶತಮಾನದವರೆಗೆ ವ್ಯಾಪಿಸಿದ್ದಾರೆ. ಇವರು ಏಕವಾಗಿಯೇ ಶಿವಭಕ್ತಿ ಪ್ರಸಾರವನ್ನು ಮಾಡುತ್ತಾ ಹೊರಟವರು. ಇತರೆಲ್ಲ ಆಂದೋಲನಗಳಲ್ಲಿ ನಾಯಕರು ಉಂಟಾದಂತೆ ಒಂದು ಸ್ಪಷ್ಟ ಚಳುವಳಿಯ ಸ್ವರೂಪ ಬಂದಂತೆ ಇವರ ಕಾಲದಲ್ಲಿ ಒಮ್ಮೆಲೇ ಬರಲಿಲ್ಲ. ಸಣ್ಣ ಸಣ್ಣ ನದಿಗಳು ಕೂಡಿಕೊಳ್ಳುತ್ತ ಒಂದೆಡೆ ಪ್ರವಾಹವಾಗಿ ಮಹಾನದಿಯಾಗಿ ಹರಿಯುವಂತೆ ಇವರ ಪ್ರತಿ ಒಬ್ಬೊಬ್ಬರ ಸತತ ಪ್ರಯತ್ನದಿಂದ ಸಮಾಜದಲ್ಲಿ, ಅದರಲ್ಲೂ ರಾಜರ ಮೇಲೆ ಪ್ರಭಾವ ಆಗಿ ರಾಜಕೀಯನಾಗಿ ಮೊದಲು ಬೆಂಬಲಗಳಿಸಿಕೊಂಡು ವ್ಯಾಪಕವಾಯಿತು. ಇಲ್ಲಿ ಯಾರೊಬ್ಬರನ್ನೂ ನಾಯಕರೆಂದು ಕರೆಯುವಂತಿಲ್ಲ, ಯಾಕೆಂದರೆ ಇವರೆಲ್ಲರೂ ಸಮಕಾಲೀನದಲ್ಲಿ ಬದುಕಿ ಬಾಳಿದವರಲ್ಲ. ಮನೆಯವರು ಒಂದು ಸಸಿ ನೆಟ್ಟು ಪೋಷಿಸಿದರು. ಅದನ್ನು ಅವರ ನಂತರದವರು ಪೋಷಿಸುತ್ತಾ ಹೋದರು. ಅದು ದೊಡ್ಡ ತೆಂಗಿನಮರವಾಗಿ ಫಲಕೊಡತೊಡಗಿತು. ತಮಿಳು ಪುರಾತನರು ಶಿವಭಕ್ತಿಯ ಸಸಿಯನ್ನು ಪೋಷಿಸುತ್ತ ಹೋದರು. ಇವರು ಬೇರೆ ಬೇರೆ ಕಾಲದಲ್ಲಿ ಆಗಿ ಹೋಗಿ ಒಟ್ಟು ಸಂಖ್ಯೆಯಲ್ಲಿ ಅರವತ್ತು ಮೂವರು ಆದುದರಿಂದ ಮತ್ತು ಶಿವಭಕ್ತಿಯ ಪ್ರಚಾರದಲ್ಲಿ ಶೈವ ಧರ್ಮದ ಅನುಯಾಯಿಗಳಾಗಿ ಪೂರ್ವದವರಾದುದರಿಂದ ಅರವತ್ತ ಮೂವರು ಪುರಾತನರೆಂದೇ ಕರೆಯಲಾಯಿತು. ಯಾರೊಬ್ಬರ ಪ್ರಚಾರಕಾರ್ಯ ವ್ಯಕ್ತಿತ್ವವೊಂದನ್ನೇ ಗಮನಿಸಿ ಆತನ ಹೆಸರಿನಿಂದ ಕರೆಯುವುದನ್ನು ನಾವು ಇಲ್ಲಿ ಕಾಣಲಾಗುವುದಿಲ್ಲ. ವಚನಕಾರರ ಕಾಲದಲ್ಲಿ ಬಸವಣ್ಣ, ಅಲ್ಲಮ ಇವರು ನಾಯಕರೆಂದು ಇತರೆಲ್ಲ ಶರಣರಿಗೆ ಮಾರ್ಗದರ್ಶನ ನೀಡಿದರೆಂದು ಕರೆದು ಅವರಿಗೆ ಮೊದಲ ಮಣೆ ಹಾಕುತ್ತೇವೆ. ಆದರೆ ಈ 63 ಪುರಾತನರ ಸಂದರ್ಭದಲ್ಲಿ ಹಾಗೆ ಕರೆಯದೆ ಎಲ್ಲರನ್ನೂ ಸಮಾನವಾಗಿ ಕರೆದಿರುವುದನ್ನು ಗಮನಿಸಿದರೆ ಎಲ್ಲರ ಪ್ರಾಮುಖ್ಯವೂ ಇದೆಯೆಂಬುದು ಗೋಚರವಾದೀತು.

63 ಪುರಾತನರಲ್ಲಿ ಬ್ರಾಹ್ಮಣ ಧರ್ಮೀಯರಿಂದ ಹಿಡಿದು ಒಕ್ಕಲಿಗ, ಕುರುಬ, ಬೇಡ ಇತ್ಯಾದಿ ವರ್ಣದವರೂ ಇಲ್ಲಿದ್ದಾರೆ. ಇಲ್ಲಿ ಗಮನಿಸಬೇಕಾದುದೆಂದರೆ ಪ ತಿಯೊಬ್ಬರು ಶೈವ ಧರ್ಮ ಪ್ರಚಾರ ಕಾರ್ಯದಲ್ಲಿ ಮಗ್ನರಾದರೆಂಬುದನ್ನು. ಅಲ್ಲದೆ ಇವರು ಒಬ್ಬರಿಗಿಂತ ಮತ್ತೊಬ್ಬರು ಬೇರೆ ಧೋರಣೆಯನ್ನು ಉಳ್ಳವರಾಗಿದ್ದಾರೆ. ವರ್ಣಾಶ್ರಮ ಪದ್ಧತಿಯ ಬಗೆಗೆ ಕೆಲವರು ಏನೊಂದೂ ಮಾತನಾಡುವುದಿಲ್ಲ. ಬೇಡರ ಕಣ್ಣಪ್ಪ, ಸೇದಿ ರಾಜ, ಹಲಾಯುಧ ಇವರು ಪೂಜೆಯೊಂದನ್ನೇ ಮುಖ್ಯವಾಗಿ ಗಮನದಲ್ಲಿರಿಸಿಕೊಂಡವರು. ಅದಕ್ಕಾಗಿ ಎಲ್ಲ ತ್ಯಾಗಕ್ಕೂ ಸಿದ್ಧರಾದವರು. ಇನ್ನು ಕೆಲವರು ದೇವಾಲಯ ಕಟ್ಟಿಸುತ್ತಾರೆ. ಯಜ್ಞಯಾಗಾದಿಗಳನ್ನು ಮಾಡುತ್ತಾರೆ. ಇನ್ನೂ ಕೆಲವರು ಧರ್ಮ ಪ್ರಚಾರ ಕಾರ್ಯ ಮಾಡಿ ರಾಜನನ್ನು ಪರಿವರ್ತಿಸುತ್ತಾರೆ. ಜೈನರು ಪರವಾದಿಗಳನ್ನು ವಾದದಲ್ಲಿ ಸೋಲಿಸುತ್ತಾರೆ. ಉಗ್ರವಾಗಿ ಮಾತನಾಡುತ್ತಾರೆ. ಮಹೇಶ್ವರ ನಿಷ್ಠೆ ವ್ಯಕ್ತಪಡಿಸುತ್ತಾರೆ. ಶಿವನದೆ ಯಾರೂ ಇಲ್ಲ. ಎಂದು ವಾದಿಸುತ್ತಾರೆ ಸಮಾಜ ಸುಧಾರಣೆಯಲ್ಲಿ ಇನ್ನೂ ಕೆಲವರು ತೊಡಗುತ್ತಾರೆ. ಜಾತಿ, ಕುಲ, ಗೋತ್ರಗಳನ್ನು ಲೆಕ್ಕಿಸುವುದಿಲ್ಲ. ವೃತ್ತಿಸೂಚಕ ಕಾಯಕ, ಜಾತಿ ಸೂಚಕವಲ್ಲ. ಆತ ವೃತ್ತಿಯಿಂದ ಕೀಳು ಕುಲದವನೆಂದು ಕರೆಸಿಕೊಳ್ಳಬೇಕಿಲ್ಲ. ಕೆಲವರ ಪೂಜಾವಿಧಿ, ಜಪ, ಸ್ತೋತ್ರಗಳಿಂದ ಶಾಸ್ತ್ರೋಕ್ತವಾದುದಾದರೆ ಇನ್ನೂ ಕೆಲವರ ಪೂಜೆ ಯಾವ ಶಾಸ್ತ್ರಗಳನ್ನೂ ಲೆಕ್ಕಿಸದೆ ಮನ ಬಂದಂತೆ ಪೂಜಿಸುವುದಾಗಿದೆ. ಇಲ್ಲಿ ಭಕ್ತಿ ಮುಖ್ಯವೇ ಹೊರತು ಬೇರೆ ಏನೂ ಅಲ್ಲ. ಎಷ್ಟು ತ್ಯಾಗ ಮತ್ತು ನಿರ್ಮಲ ಮನಸ್ಸಿನಿಂದ ಅರ್ಪಿಸುತ್ತಾನೆ ಎಂಬುದು ಮುಖ್ಯ. ಇವರ ನಿಷ್ಠೆ, ಶ್ರದ್ಧೆಗಳು, ಶಿವಭಕ್ತಿ ಪ್ರಸಾರ ಕಾರ್ಯದ ವಿಧಾನ ಇವುಗಳ ಪ್ರಭಾವ ವಚನಕಾರರ ಮೇಲೆ ಪ್ರಬಲವಾಗಿ ಆಗಿದೆ. ಈ ಬಗ್ಗೆ ಮುಂದೆ ಒಂದು ಅಧ್ಯಾಯದಲ್ಲಿ ವಿವರ ಬರುತ್ತದೆ.

**ಶೈವ ಧರ್ಮದ ಪ್ರಗತಿ**

ಅರವತ್ತು ಮೂವರು ಪುರಾತನರು ಉಂಟಾದದ್ದಾಗಲಿ ಶೈವ ಧರ್ಮದ ಪ್ರಗತಿ ಕಂಡಿದ್ದಾಗಲಿ ಬಿಗಿಯಾದ ಯಾವುದೇ ತತ್ವಗಳಿಲ್ಲದ್ದರಿಂದ ಮತ್ತು ಬಂದ ಎಲ್ಲ ಭಕ್ತರಿಗೂ ಈ ಪರಿವಲಯದಲ್ಲಿ ಸ್ವಾಗತ ಇದ್ದಿದ್ದರಿಂದ. ಈ ಮುಂಚೆ ಜೈನ ಧರ್ಮವಾಗಲಿ, ಭೌದ್ಧ ಧರ್ಮವಾಗಲಿ ದೇವರುಗಳನು ಅಲ್ಲ

ಗಳೆದು ಬುದ್ಧ ಮುಂತಾಗಿ ತನ್ನ ತತ್ವಗಳ ಖಚಿತ ಆಚರಣೆಯಲ್ಲಿ ಮುಂದುವರಿದಿದ್ದವು. ಇಲ್ಲಿ ದೇವ ಭಕ್ತ ಸಂಬಂಧ ಇರಲಿಲ್ಲ. ಜೈನ ಮತ್ತು ಭೌದ್ಧ ಧರ್ಮದ ಪರಿವಲಯದಲ್ಲಿ ಬಂದ, ಬರುವ ಅನುಯಾಯಿಗಳೆಲ್ಲ ಗೃಹಸ್ಥ ಜೀವನವನ್ನು ತೊರೆದವರೇ ಆಗಿದ್ದರು. ಪರಿಪೂರ್ಣರಾಗಲು ಹಲವು ರೀತಿಯ ಸಾಧನೆಗಳನ್ನು ಮಾಡುತ್ತ ದೇಹದಂಡನೆಯನ್ನು ಈ ಮಾರ್ಗದಲ್ಲಿ ಮಾಡಬೇಕಾಗಿತ್ತು. ಪ್ರಪಂಚವನ್ನೇ ತ್ಯಜಿಸಿ ಯಾವ ಸುಖ, ಭೋಗಗಳನ್ನೂ ಪಡೆಯದೇ ಮೋಕ್ಷ ಗುರಿಯಾಗಿಟ್ಟುಕೊಂಡ ಈ ತತ್ವಾಚರಣೆಗಳು ತಪ್ಪುವ, ಎಡಹುವ ಸಾಧಕನಿಗೆ, ಪ್ರಾಪಂಚಿಕನಿಗೆ ಎಟುಕದ ಹಣ್ಣಾಗಿತ್ತು. ಪುರಾತನರಲ್ಲಿ ಬಂದವರೆಲ್ಲ ಸಾಮಾನ್ಯವಾಗಿ ಗೃಹಸ್ಥರು. ಭಾವುಕರು, ಭಾವನೆಗಳಿಗೆ ಇಲ್ಲಿ ಪ್ರಧಾನವಾದ ಸ್ಥಾನವಿದೆ. ನಂಬಿಕೆಗಳು ಅವರ ಜೀವನವನ್ನು ರೂಪಿಸಿವೆ. ಇವರು ಭೌದ್ಧ, ಜೈನರಂತೆ ಊರನ್ನು ತ್ಯಜಿಸಿ ಕಾಡಿಗೆ ಹೋಗಿ ತಪಸ್ಸು ಸಾಧನೆ ಮಾಡಿದವರಲ್ಲ. ಊರಿನಲ್ಲಿಯೇ ಇದ್ದು ನಡೆಯುತ್ತ ಎಡವಿದವರು. ಎಡವುತ್ತಲೇ ಎಡವುದನ್ನು ನಿವಾರಿಸಿಕೊಂಡವರು. ಇವರಿಗೆ ಪ್ರಪಂಚದ ಭೋಗ ತ್ಯಾಜ್ಯವಲ್ಲ. ಭಕ್ತನಿಗೆ ದೇವರು ಬೇಕಾದಂತೆ ಶಿವನನ್ನು ಆರಾಧಿಸುವ ಭಾವನೆಗಳು ಉತ್ಕಟವಾಗಿ ಹೊಮ್ಮುವಂತೆ ದೇಹ ಪಡೆದ ಈ ಸಾಧಕನಿಗೆ ಇಂದ್ರಿಯಗಳೂ ಇರುವುದರಿಂದ ವಿಷಯ ಸುಖವೂ ಬೇಕು. ಸೌಂದರನಂಬಿಯಂತಹವರು ಒಂದಲ್ಲ ಎರಡು ಹೆಣ್ಣುಗಳನ್ನು ಕಟ್ಟಿಕೊಳ್ಳುತ್ತಾರೆ. ದಾಂಪತ್ಯ ಸುಖವೂ ಶಿವನಿಗೆ ಹಿತವೇ. ದೇವನ ಪೂಜಾ ವಿಧಾನದ ಹಾದಿಯಲ್ಲಿ ಭಾವನೆಗಳನ್ನು ಮನ ಬಂದಂತೆ ಹರಿಯ ಬಿಡುವ ಇವರು ಹೆಣ್ಣಿನ ಸುಖ ಬೇಕೆಂದಾಗ ಆಕೆಯನ್ನು ಪಡೆಯಲು ಪತ್ನಿಯನ್ನಾಗಿ ಸ್ವೀಕರಿಸಲು ಭಾವನೆಗಳನ್ನು ಹಿಂದು ಮುಂದು ನೋಡದೆ ಹರಿಯ ಬಿಟ್ಟವರು ಇವರು.

ಭೌದ್ಧ, ಜೈನ ಧರ್ಮಗಳು ಭಕ್ತ-ದೇವರ ನಡುವಿನ ಸಂಬಂಧಗಳನ್ನು ತಡೆದದ್ದೇ ಅಲ್ಲದೆ ಭಕ್ತನ ಭಾವಗಳನ್ನು ತೀವ್ರ ತುಡಿತಗಳನ್ನು ಕೊಂದುಹಾಕಿದ್ದವು. ಅದೇ ಶೈವ ಧರ್ಮವಾದರೋ ಭಾವನೆಗಳಿಗೆ ಹೊರದಾರಿಯನ್ನು ನೀಡಿತು. ಇಲ್ಲಿ ಭಕ್ತ ತನ್ನ ಶಿವನನ್ನು ಅನಂತವಾಗಿ ಹಾಡಿ ಹೊಗಳುತ್ತಾನೆ. ಶಿವ ಮತ್ತು ಭಕ್ತರ ನಡುವೆ ಭಾವನಾತ್ಮಕ ಸಂಬಂಧ ಬೆಳೆದದ್ದು ಮನುಷ್ಯ-

ಮನುಷ್ಯರ ನಡುವೆ ಇಂತಹ ಸಂಬಂಧಗಳನ್ನು ರೂಢಿಸಿತು. ಇದರಿಂದ ಇಳೆಯ ಜನಗಳ ನಡುವೆ ಸಂಬಂಧ ತಾನೇತಾನಾಗಿ ಬೆಳೆಯಿತು. ಪ್ರಂಪಚದ ತ್ಯಾಜ್ಯ ಆಗ ಲಿಲ್ಲ. ಪ್ರಪಂಚ ದೇವಭಕ್ತರ ನಡುವಿನ, ಮನುಷ್ಯ–ಮನುಷ್ಯನ ನಡುವಿನ ಸಂಬಂಧಗಳನ್ನು ಉಳಿಸುವ ಬೆಳೆಸುವ ಒಂದು ನೆಲೆ ಆಯಿತು. ಹೀಗಾದ್ದರಿಂದ ಇವರು ಸಂಸಾರಿಕರಂತೆಯೂ ಬದುಕುತ್ತಾರೆ. ಸನ್ಯಾಸಿಗಳಂತೆಯೂ ಬದುಕುತ್ತಾರೆ. ಇವರಿಗೆ ದೇವರುಬೇಕು. ಪ್ರಪಂಚವೂ ಬೇಕು. ದೇವರು ಬೇಕಾದ್ದರಿಂದ ಹಾಡಿ ಹಂಬಲಿಸುತ್ತಾರೆ. ಪ್ರಪಂಚ ಬೇಕಾದ್ದರಿಂದ ಕೂಡಿ ಸುಖಿಸುತ್ತಾರೆ.

ಈ ಪುರಾತನರು ಪ್ರಾಪಂಚಿಕ ಸುಖವನ್ನು ಪಡೆಯುತ್ತಲೇ ಮನುಷ್ಯನ ಎಲ್ಲ ರಾಗ, ದ್ವೇಷಗಳನ್ನು ದುಡಿಸಿಕೊಂಡವರು. ಒಬ್ಬರಾಜ ತನ್ನರಾಜ್ಯದ ಪ್ರಗತಿಗಾಗಿ, ತನ್ನ ಪ್ರಭುತ್ವಕ್ಕಾಗಿ ಏನೆಲ್ಲ ಉಪದ್ಯಾಪಮಾಡುವಂತೆ ಶೈವಧರ್ಮ ಹರಡುವಲ್ಲಿ ಅದರ ಸಾರ್ವಭೌಮತ್ವವನ್ನು ಸಾರುವಲ್ಲಿ ಏನೆಲ್ಲ ಕಠೋರ ನಿಯಮಗಳನ್ನು ಈರ್ಷೆದ್ವೇಷ, ಛಲಗಳನ್ನು ಸಾಧಿಸಿದವರು. ಇವರಲ್ಲಿ ಅಸಂಖ್ಯ ತಪ್ಪುಗಳಿವೆ. ಅಂತೆಯೇ ಗುಣಗಳು ಇವೆ. ಈ ತಪ್ಪು ಗುಣಗಳು ಇತರರನ್ನು ಕೈಬೀಸಿ ಕರೆಯುತ್ತವೆ. ಯಾಕೆಂದರೆ ಶಿವೋಪಾಸಕನಾಗಿ ಗುಣಗಳನ್ನು ಸಂಪಾದಿಸಿಕೊಂಡು ಸಾಧಕನಾಗುತ್ತ ಹೋದಂತೆ ಅಲ್ಲಿ ತಪ್ಪಿದರೂ ಆತನಿಗೆ ಕ್ಷಮೆ ಇದೆ ಎಂಬುದು ಜನರಿಗೆ ಸಮಾಧಾನದ ಸಂಗತಿ. ಇತರ ಜನಗಳಿಗೆ ಇಲ್ಲಿ ತಪ್ಪಿಗೂ ಕ್ಷಮೆ ಇದೆಯೆಂಬುದು ಅವರು ತಮ್ಮಂತೆ ತಪ್ಪು ಮಾಡುವವರಿದ್ದು ಶಿವನನ್ನು ಒಲಿಸಿಕೊಳ್ಳುತ್ತಾರೆಂಬುದೂ ನಾವೂ ಹೀಗೆ ತೊಡಗಬಹುದಲ್ಲ ಎಂಬ ಭಾವನೆಗಳನ್ನು ದೀಪ್ತಗೊಳಿಸಿದವು. ಕುಲಜಾತಿಗಳಿಗೆ ಇಲ್ಲಿ ಮುಖ್ಯಸ್ಥಾನವಿಲ್ಲ. ಆತ ಭಕ್ತನಿದ್ದರೆ ಮುಗಿಯಿತು. ಶಿವನನ್ನು ಕಾಣುವ ಮನಸ್ಸು ಆತನಿಗಿದ್ದರೆ ಆತ ಶಿವಭಕ್ತನಾಗಬಹುದು. ಇನ್ನು ಮುಂದುವರಿದು ತನಗೆ ಸಮಾಧಾನ, ಶಾಂತಿ ತಂದುಕೊಟ್ಟ ಈ ಧರ್ಮವನ್ನು, ಈ ವಿಧಾನವನ್ನು ಇತರರಿಗೂ ತಿಳಿಸಬಹುದು. ಹೀಗೆ ಧರ್ಮ ಪ್ರಚಾರದಲ್ಲಿ ತೊಡಗಿದಾಗ ತನ್ನ ಶೈವಧರ್ಮ ಯಾಕೆ ಶ್ರೇಷ್ಠ ಎಂಬುದನ್ನು ಸ್ಥಾಪಿಸಿ ಇತರ ತತ್ವ, ಧರ್ಮಗಳನ್ನು ಅಲ್ಲಗಳೆಯಬಹುದು.

ಅರವತ್ತು ಮೂವರು ಪುರಾತನರ ಬದುಕಿನ ತುಂಬ ಅನೇಕ ಒಳವಿರೋಧಗಳು ತುಂಬಿಕೊಂಡಿವೆ. ತಾನೇ ಅವುಗಳ ಬಗ್ಗೆ ಜಿಗುಪ್ಸೆಪಟ್ಟುಕೊಂಡರೂ ಅವು

ಗಳನ್ನು ಬಿಡಲಾರ. ಈಗಾಗಿ ಇವುಗಳಿಗೆಲ್ಲ ಕ್ಷಮೆ. ಆ ಕ್ಷಮೆ ಭಕ್ತರಿಗೂ ಒಪ್ಪಿಗೆ ಯಾದದ್ದು. ಶಿವನಿಂದಲೂ ಸಮ್ಮತಿ ಪಡೆದದ್ದು. ಈ ಅರುವತ್ತು ಮೂವರು ಪುರಾತನರಕಾಲ, ಚರಿತ್ರೆಗಳು ನಿರ್ದಿಷ್ಟವಾಗಿ ತಿಳಿದಿಲ್ಲ. ಅಪ್ಪಾರ್ ಮತ್ತು ತಿರು ಜ್ಞಾನ ಸಂಬಂಧರ್‌ಗೆ ಪೂರ್ವದಲ್ಲಿ 17 ಪುರಾತನ ಶರಣರಿದ್ದರು. ಅಮರನೀತಿ ನಾಯನಾರ್, ಅರಿವಾಳ್ತಾಯಾರ್, ಕುರ್ರುವ ನಾಯನಾರ್, ಕೋಚ್ಚೆಂಗಣ ಚೋಳರ್, ಶಂಡೇಶ್ವರರ್, ಶೇಕ್ಕಿಯ ನಾಯನಾರ್, ತಂಡಿಯಡಿಗಳ ನಾಯ ನಾರ್, ನಮಿನಂದಿ ಅಡಿಗಳ್, ಪುಗಳ್ ತುಣೈನಾಯನಾರ್, ಮೂರ್ತಿನಾಯ ನಾರ್ ಇವರು ಈ ಪೂರ್ವದಲ್ಲಿ ಮುಖ್ಯರು. ಇವರಲ್ಲಿ ಪರಸ್ಪರ ಯಾರು ಯಾರು ಸಮ ಕಾಲೀನರು ? ಇವರ ಜೀವಿತಾವಧಿಯಾವುದು ಇವರ ಕಾರ್ಯ ವಿಧಾನಗಳು ಎಂತಹವು ಎಂಬುದಕ್ಕೆ ಸಬಲ ಆಧಾರಗಳು ದೊರೆಯುವುದಿಲ್ಲ. ನಮಗೆ ದೊರೆಯುವುದೇನಿದ್ದರೂ ಕಾವ್ಯಗಳಿಂದ. ಅದರಲ್ಲೂ ನಮ್ಮ ಕನ್ನಡದಲ್ಲಿಹರಿಹರ, ಸುರಂಗ ಮತ್ತಿತರ ಕಾವ್ಯಗಳಿಂದ ದೊರೆಯುವ ಸಂಗತಿಗಳು ಅಲ್ಲೊಂದು ಇಲ್ಲೊಂದು ವಾಸ್ತವ ಎಳೆಗಳನ್ನು ತಿಳಿಸುತ್ತವೆ. ತೇವಾರಂಗಳನ್ನು ಬರೆದಿರುವ ಪುರಾತನರಿಂದ ಅವರಭಕ್ತಿ, ಮನೋಧರ್ಮದ ಬಗೆಗೆ ಒಂದಿಷ್ಟು ವಿವರ ತಿಳಿ ಯುತ್ತದೆ. ಎಲ್ಲ ಪುರಾತನರೂ ಪ್ರಾರ್ಥನೆ ತೇವಾರಂಗಳನ್ನು ಹಾಡದಿರುವು ದರಿಂದ (ಬರೆಯದಿರುವುದರಿಂದ) ಆ ಮಸಾಗ್ರಿಗೂ ಕೊರತೆ ಬೀಳುತ್ತದೆ. ತಿರುಜ್ಞಾನ ಸಂಬಂಧರ್ ಮತ್ತು ಅಪ್ಪರ್‌ಗೆ ಪೂರ್ವದ ಪುರಾತನರಲ್ಲಿ ಬ್ರಾಹ್ಮಣ, ವೇಳಾಳ, ವೈಶ್ಯ, ಬೇಡ, ಅರಸು, ಆದಿಶೈವರಿದ್ದಾರೆ. ಹುಲ್ಲುಮಾರಿ ಜೀವನ, ಸಾಗಿಸುತ್ತಿದ್ದ ಕಣಂಪುಲ್ಲ ನಾಯನಾರ್ ಕುಲಗೊತ್ತಿಲ್ಲದಿದ್ದರೂ ಸಮಾಜದ ವರ್ಣವ್ಯವಸ್ಥೆಯನ್ನು ಗಮನಿಸಿ ಮಾತಾಡುವುದಾದರೆ ಈತಶೂದ್ರ ವರ್ಣದವ ನೆಂದು ಹೇಳಬಹುದು. ಈತನ ವ್ರತಾಚಾರಣೆ ತುಂಬ ವಿಶಿಷ್ಟವಾದುದು. ಹುಲ್ಲುಮಾರಿ ಬಂದಹಣದಿಂದ ಶಿವನಿಗೆ ದೀಪ ಬೆಳಗಿಸುವುದುಇವನ ವ್ರತ ಗಳಲ್ಲಿ ಒಂದು.

ಅಮರ ನೀತಿಗಳು, ಮೂರ್ತಿನಾಯನಾರ್ ವೈಶ್ಯ ಕುಲದವರು. ಅರಿವಳ್ತಾಯರ್, ಶಾಕ್ಕಿಯ ನಾಯನಾರ್ ವೇಳಾಳ ಕುಲದವರು. ಬ್ರಾಹ್ಮಣ, ಆದಿಶೈವರಾದರೆ ಕೊಚ್ಚೆಂಗಣ ಚೋಳರ್ ಅರಸುಕುಲದವ. ಎಲ್ಲರೂ ಶಿವ ಭಕ್ತರಾಗಿದ್ದುಕೊಂಡು ಬದುಕು ಸಾಗಿಸಿದವರು. ಶಿವಪಕ್ಷ ಹಿಡಿದು ಅವಕ್ಕಾಗಿ

ತಮ್ಮ ಬದುಕು ಮೀಸಲಿರಿಸಿದ್ದರು. ಜನಮಧ್ಯದಲ್ಲಿ ಅಲ್ಲಲ್ಲಿ ಇಂತಹ ಶಿವಭಕ್ತರಿದ್ದರಿಂದಲೇ ಶಿವಧರ್ಮ ಪ್ರಸಾರ ಆದದ್ದು. ತಮ್ಮ ಪ್ರಾರ್ಥನೆ ಮತ್ತು ಬದುಕಿನಿಂದ ಶಿವಭಕ್ತಿಯಿಂದ ಹೆಸರು ಮಾಡಿದ ಇವರು ಜನಪ್ರಿಯರಾದರು. ಅದುವರೆಗೆ ಆಗಿಹೋಗುತ್ತಿದ್ದ ಬದುಕಿನ ಗತಿಯಲ್ಲಿ ಸುದ್ದಿಮಾಡಿದ ಇವರು ಶಿವಭಕ್ತರು ಹೀಗೂ ಇರಬಲ್ಲರು, ಸಂಸಾರವನ್ನು ನಡೆಸಬಹುದು ಎಂಬುದಕ್ಕೆ ದೀವಿಗೆ ಆದವರು.

ಅನಾಯನಾಯರರು ವೃತ್ತಿ ಸೂಚಕ ಹೆಸರಿನಿಂದ ಕರೆಸಿಕೊಳ್ಳುತ್ತಿದ್ದ ಶಿವಭಕ್ತರು. ಅನಾಯ ಎಂದರೆ ಕುರುಬರು. ಕುಲ ಹೆಸರಿನ ಜೊತೆ ಸೇರಿಸಿಕೊಂಡು ಪ್ರಚಲಿತಕ್ಕೆ ಬಂದುದಕ್ಕೆ ಇವರಲ್ಲಿ ಉದಾಹರಣೆ ಸಿಗುತ್ತದೆ. ಎರಿಪತ್ತನಾಯನಾರ್ ಕಣಂಬುಲ್ಲನಂಬಿ ಎಂಬವರನ್ನು ಇದಕ್ಕೆ ಹೆಸರಿಸಬಹುದು. ಇದೇ ಥರ ಕರೆಯುವಿಕೆ ಶರಣರಲ್ಲಿ ಮುಂದುವರಿದಿದೆ. ಮಾದಾರ ಚೆನ್ನ, ಡೋಹರ ಕಕ್ಕ, ಜೇಡರದಾಸಿಮಯ್ಯ ಇತ್ಯಾದಿ ಹೆಸರುಗಳನ್ನು ಇಲ್ಲಿ ಪ್ರಭಾವಿತತವಾದುದಕ್ಕೆ ವೃತ್ತಿಸೂಚಕವಾಗಿ ಕರೆಯುತ್ತಿದ್ದುದಕ್ಕೆ ಉದಾಹರಿಸ ಬಹುದಾಗಿದೆ. 63 ಪುರಾತನರಲ್ಲಿ ಬ್ರಾಹ್ಮಣರು 14 ಮಂದಿಯೂ. ಒಕ್ಕಲಿಗರು (ವೇಳಾಳರ್) 13 ಮಂದಿಯೂ, ಕ್ಷತ್ರಿಯರು 12, ವೈಶ್ಯರು 5, ಆದಿಶೈವರು 4, ಕುರುಬರು ಇಬ್ಬರು, ಬೆಸ್ತ, ಬೇಡ, ಗಾಣಿಗ, ಅಗಸ, ಕುಂಬಾರ, ಹಿಡುವ, ಗೋಸಾಲ, ನೇಕಾರ, ಸಮಗಾರರು ತಲಾ ಒಬ್ಬರೂ ಕುಲ ತಿಳಿಯದ ನಾಲ್ವರು ಇದ್ದಾರೆ. ಇವರು ಸಮಾಜದ ವಿವಿಧ ಸ್ತರಗಳಿಂದ ಬಂದವರು. ಸಾಮಾನ್ಯ ಜನತೆಯಿಂದ ಹಿಡಿದು ಆರ್ಥಿಕವಾಗಿ ಮತ್ತು ಭದ್ರವಾದ ಸ್ಥಾನ ಮಾನ ಪಡೆದ ಬ್ರಾಹ್ಮಣ, ಕ್ಷತ್ರಿಯ ಕುಲದವರೆಗೂ ಶೈವಧರ್ಮ, ಅನುಯಾಯಿಗಳನ್ನು ಪಡೆದಿದೆ. ಇಲ್ಲಿ ವರ್ಣ ಮುಖ್ಯ ಆಗಲಿಲ್ಲ. ಶೈವ ಅನುಯಾಯಿಯೇ ಅಲ್ಲವೇ ಎಂಬುದು ಮುಖ್ಯ ಆಯಿತು.

ಭಕ್ತರು ಮತ್ತು ಶಿವನಿಗೆ ಎಲ್ಲವನ್ನು ಅರ್ಪಿಸುವ ಶಿವಪಥದ ಹೆಜ್ಜೆ, ಶಿವಭಕ್ತನಾದವನಿಗೆ ಭಕ್ತಹೃದಯ ಇದ್ದರೆ ಸಾಕು. ಭಕ್ತಿ ಪಕ್ವ ಬೇಕು. ಭಕ್ತಿಪ್ರಸಾರಮಾಡುವ ಚಾತಿ ಇದ್ದರೆ ಇನ್ನು ಒಳ್ಳೆಯದು. ಕಠೋರನಿಷ್ಠೆಯಿಂದಾಗಿ ಶಿವನಿಗೆ ಮೀಸಲಾದದ್ದು ತನ್ನ ಮನೆಯವರೇ ಬರ ಬಂದಾಗ ಊಟ

ಮಾಡಿದರೂ ಅವರನ್ನೂ ಶಿಕ್ಷಿಸುವಷ್ಟು ಕಠೋರ ಹೃದಯವು ಈ ಪುರಾತನರಲ್ಲಿ ಇದೆ. ಒಂದು ರೀತಿಯ ಮಹೇಶ್ವರ ನಿಷ್ಠೆ ಇವರದು. ಶಿವನಲ್ಲದೇನುವರಿಯದ ಒಟ್ಟಿಯಿಂದ ಕೂಡಿದ್ದ ಇಹಃಪಗೆಯೂಂಡರ್, ಭಕ್ತ ವೇಷದ ಶಿವನಿಗೆ ಹೆಂಡ ತಿಯನ್ನು ಕೊಡುತ್ತಾನೆ. ಹಸಿದು ಬಂದ ಭಕ್ತನಿಗೆ ಇಳೆಯೂಂಡಗುಡಿಮೂರ ನಂತಹವರು ಬಿತ್ತಿದ್ದ ಬೀಜವನ್ನು ತಂದು ಉಣಬಡಿಸುತ್ತಾರೆ. ಭಕ್ತರನ್ನು ಶಿವ ನಂಬಿದನೆಂದೇ ಏಣಾದಿನಾಯನಾರ್ ಭಕ್ತವೇಷದ ವೈರಿಯಿಂದ ಹತನಾದ. ಶಂಡೇಶ್ವರರ್‌ಕ್ಷೀರಾಭಿಷೇಕ ಮಾಡುವ ವ್ರತ ಉಳ್ಳವನಾದರೆ, ಕಲಿಯನಾಯ ನಾರ್, ಕಣಂಬುಲ್ಲ ನಂಬಿ ದೀಪಾರ್ಚನೆ ವ್ರತಹಿಡಿದವರು. ಕೃತಾಂತರು ಮತ್ತು ಶಕ್ತಿಯನಾಯನಾರರು ಶಿವನಿಂದಕರಿಗೆ ಯಮಪ್ರಾಯರಾಗಿದ್ದವರು. ಅವರನ್ನು ಶಿಕ್ಷಿಸುತ್ತಿದ್ದರು. ಕಠೋರವಾಗಿ ವಿರೋಧಿಸುತ್ತಿದ್ದರು.

ಅಯ್ಯಡಿಗಳು, ಕಳರ್‌ಜಂಗನಾಯನಾರ್, ಕೋಚ್ಚೆಂಗಣ ಚೋಳರ್, ಇವರುಗಳು ದೇವಾಲಯಗಳನ್ನು ಕಟ್ಟಿಸಿದರು. ಶಿವಧರ್ಮದ ಖ್ಯಾತಿಗೆ ಈ ರಾಜರುಗಳ ಬೆಂಬಲ ದೊರೆತದ್ದರಿಂದ ಶೈವಧರ್ಮ ಬೇಗ ಖ್ಯಾತ್ಯವಾಗಲು, ಪ್ರಚಾರವಾಗಲು ಸಾಧ್ಯಆಯಿತು. ನಾಡನಾಳುವದೊರೆ ಶೈವಧರ್ಮಕ್ಕೆ ಪರಿ ವರ್ತನೆಗೊಳ್ಳುವುದು, ಶಿವಧರ್ಮ ಪ್ರಚಾರದಲ್ಲಿ ಶ್ರದ್ಧೆ ತೋರಿ ಬೆಂಬಲ ನೀಡು ವುದು ಆಗತಾನೆ ಹಬ್ಬುತ್ತಿದ್ದ ಬಳ್ಳಿಗೆ ಆಸರೆ ನೀಡಿದಂತಾಯಿತು. ಸ್ತೋತ್ರ ಗಳನ್ನು ಹಾಡುವುದು, ಶಿವನನ್ನು ಒಲಿಸಿಕೊಳ್ಳುವುದು ಬದುಕಿನ ಅವಿಭಾಜ್ಯ ಅಂಗವಾಯಿತು ಇವರಿಗೆ.

ಕುಲಚ್ಚರಿಯರ್ ಪಾಂಡ್ಯದೊರೆಯ ಮಂತ್ರಿ. ಈತ ತಿರುಜ್ಞಾನ ಸಂಬಂ ಧರ್ ಅವರಿಂದ ಶೈವಧರ್ಮಕ್ಕೆ ಪರಿವರ್ತನೆ ಹೊಂದಿದ. ತಾನು ಶಿವಭಕ್ತ ನಾಗುವುದೇ ಅಲ್ಲದೆ ಧರ್ಮಪ್ರಚಾರ ಆಗುವುದಕ್ಕೆ ಸಹಾಯನೀಡಿದ ಮತ್ತು ಧರ್ಮಪ್ರಚಾರ ಕಾರ್ಯವನ್ನು ತಾನು ಕೈಗೊಂಡ ತಿರುನಾವುಕ್ಕರಸರ್, ತಿರು ಜ್ಞಾನ ಸಂಬಂಧರ್ ಇವರ ಪಾತ್ರ ಧರ್ಮಪ್ರಚಾರ ಕಾರ್ಯದಲ್ಲಿ ತುಂಬ ದೊಡ್ಡದು. ವಾದದಲ್ಲಿ ಜೈನರನ್ನು ಸೋಲಿಸಿದರು. ಜೈನಧರ್ಮದ ಅನುಯಾಯಿಗಳನ್ನು ಶೈವಧರ್ಮಕ್ಕೆ ಪರಿವರ್ತಿಸಿದರು. ಪೂಸಲನಾಯನಾರ್ ಹೊರಗೆ ದೇವಾಲಯ ಕಟ್ಟುವುದರ ಬದಲು ತನುವನ್ನೆ ದೇವಾಲಯವನ್ನಾಗಿ ಮಾಡಿದ. ಮಹಾನುಭಾವಿ ಯಾಗಿ ಆಧ್ಯಾತ್ಮ ಬದುಕಿನಲ್ಲಿ ನಿಷ್ಠಾವಂತ ಶೈವಧರ್ಮಗಳಿಗೆ ಮಾದರಿಯಾದ.

ಸಮಗಾರ ಕುಲದ ತಿರುನಾಳೈಪ್ಪೋವರ್ ದೇವಾಲಯಕ್ಕೆಬೇಕಾದ ಚರ್ಮದ ವಸ್ತುಗಳನ್ನು ಮಾಡಿಕೊಡುತ್ತಿದ್ದ ಶಿವಭಕ್ತ. ಸೋಮಾಸಿಮಾರರ್ ಜಾತಿ ಭೇದನಿರೋಧಮಾಡುತ್ತಿದ್ದ. ಯಜ್ಞಯಾಗಗಳನ್ನು ಮಾಡುತ್ತಿದ್ದ. ಬ್ರಾಹ್ಮಣ ಕುಲದ ಈತ ಪರಧರ್ಮಿಯರನ್ನು ಜಾತಿಬೇಧ ಮಾಡುತ್ತಿದ್ದರೆ ಈತ ಶಿವ ಭಕ್ತರೆಲ್ಲ ಒಂದೇ ಎಂದು ಆಚರಿಸುತ್ತಿದ್ದರು. ಶಿರಪ್ಪುಲಿನಾಯನಾರ್ ಕೂಡ ಯಜ್ಞಯಾಗಮಾಡಿ ಪಂಚಾಕ್ಷರಿ ಮಂತ್ರ ಜಪಿಸುತ್ತಿದ್ದ. ಶಿವನ ಆರಾಧನೆ ಯಲ್ಲಿ ತೃಪ್ತಗೊಳ್ಳುತ್ತಲಿದ್ದ.

ಮೂರ್ಖನಾಯನಾರ್, ಮುನೈಯಡುವರ್, ಮೆರೆಮಿಂಡದೇವರು ಇವ ರುಗಳು ಭಕ್ತರಸೇವೆ ಮಾಡುತ್ತಿದ್ದರು. ದಾಸೋಹಕಾರ್ಯ ನಡೆಸುತ್ತಿದ್ದರು. ಭಕ್ತ ರಿಗೆ ಮೊದಲು ಉಣಿಸಿ ನಂತರ ತಾವು ಸ್ವೀಕಾರಮಾಡುತ್ತಿದ್ದರು ಕಾಯಕದಿಂದ ಬಂದ ಹಣವನ್ನು ಭಕ್ತರಿಗಾಗಿ ಅರ್ಪಿಸುತ್ತಿದ್ದ. ನೇಕಾರನಾದ ನೇಯ ನಾಯ ನಾರ್ ಶಿವಭಕ್ತರಿಗೆ ಮಾತ್ರ ಬಟ್ಟೆ ನೇಯ್ದು ಅರ್ಪಿಸುತ್ತಿದ್ದ. ತಿರುಮೂಲರ್ ದನ ಕಾಯ್ದು ಕೊಂಡಿದ್ದು ಪದ್ಯ ಗ್ರಂಥರಚನೆ ಮಾಡಿದರೆ, ತಂಡಿಯಡಿಗಳ ನಾಯನಾರ್ ಕೆರೆಕಾಲುವೆ ಕಟ್ಟಿಸಿ ಜನೋಪಯೋಗಿ ಸೇವೆಯಲ್ಲಿ ನಿರತನಾಗಿದ್ದ. ಕಾರಿಕಾಲಮ್ಮೆಯಂತಹ ಶ್ರೇಷ್ಠ ಶಿವಭಕ್ತೆ ಬಯಸಿ ವೈರಾಗ್ಯದ ಹಾದಿಯಲ್ಲಿ ನಡೆದಳು. ಇರುವ ಸಂಪತ್ತನ್ನು ತ್ಯಜಿಸಿ ಸರಳವಾದ ಬದುಕನ್ನು ಸಾಗಿಸಿದಳು. ಕಲಿಕ್ಕಂಪರು ತನ್ನ ಮನೆಯಲ್ಲಿ ಸೇವಕ ವೃತ್ತಿಯಲ್ಲಿದ್ದವನು ಭಕ್ತವೇಷ ತೊಟ್ಟು ನನ್ನು ಉಪಚರಿಸಿದ. ಶಿವಭಕ್ತರನ್ನು ಶಿವನೆಂದೇ ಕಾಣುವ ಬಂದಾಗ ಭಕ್ತರಂತೆ ಅವ ಎರಡಿಲ್ಲದ ಭಕ್ತಿಈತನದು.

ಚೇರಮನಾಯನಾರ್ ತಾನುಮಾಡಿದ ಪೂಜೆ ಶಿವನಿಗೆ ಒಪ್ಪಿಗೆಯಾ ಯಿತೋ ಇಲ್ಲವೋ, ಶಿವಭಕ್ತರನ್ನು ಉದಾಸೀನ ಮಾಡಿದೆನೋ ಏನೊ ? ಎಂದು ಅತೀತವಾಗಿ ವ್ಯಾಕುಲಪಟ್ಟುಕೊಳ್ಳುತ್ತಿದ್ದ. "ಚೋರಭೂಪಂ ಭಯಾಕುಲ ಚಿತ್ತನಾಗಿ ನಾಂ ಮಾಳ್ಪ ಪೂಜೆಯೊಳಪ್ಪಿದೆನೋ ಫಲಂ ಬಯಸಿದೆನೋ ಶಿವ ಭಕ್ತಮುಂದೆ ಬರಲು ದಾಸೀನಮಂ ಮಾಡಿದೆನೋ..ಶಿವಭಕ್ತಮುಂದೆ ಬಂದು ಬೇಳ್ಪವಸ್ತುವಂ ಕೊಡದೆ ಪೊರನೂಂಕಿಸಿದೇನೋ"[27] ಎಂದು ಶಿವಭಕ್ತರ ಬಗೆಗೆ

27. (ಚೇರ್‌ಮನಾಯನಾರ್) ಶಿವಶರಣ ಸಂಪುಟ (ಸಂ. ಎಚ್. ದೇವೀರಪ್ಪ), ಪುಟ 98.

ಕಾಳಜಿ ವ್ಯಕ್ತಪಡಿಸುತ್ತಿದ್ದ. ಈ ಥರದ ವ್ಯಾಕುಲವನ್ನು ನಾವು ಬಸವಣ್ಣನಲ್ಲಿ ಕಾಣುತ್ತೇವೆ. ಅಪ್ಪೂತಿ ಅಡಿಯರರ್ರು ವಾಗೀಶರನ್ನು ಬಸವಣ್ಣ ಭಕ್ತರನ್ನು ಬರ ಮಾಡಿಕೊಳ್ಳುವಂತೆ ಬರಮಾಡಿಕೊಳ್ಳುತ್ತಿದ್ದರು. "ಪೂರ್ವಜನ್ಮದೊಳ್ ಪುಣ್ಯವದು ವೃಡಭಕ್ತಿ ತಾಂ ಮಾಡಲ್ಕೆ ಪಟ್ಟುದದು ಆದರಿಂದ ಲಾಂ ನಿಮ್ಮ ಕಂಡೆನ್"[28] ಮೆರೆಮಿಂಡದೇವರು "ಶಿವನಲ್ಲದಾರುವಂ ಲೆಕ್ಕಿಸದ ಕಡುಮಾಸಿ ಭವನಲ್ಲ ದಾರುವನಂಯುದಶಿವೈಕದಾನಿ"[2] ಸೇದಿರಾಜರು ಶಿವನಭಕ್ತರ ಬೀಳ್ಕುಡುಗೆಯ ಹೊದ್ದು ಬದುಕುತ್ತಿದ್ದ ಸುವನ್ಮಾನಿ. ಹರನ ಭಕ್ತರು ಬಂದರೆ ಪ್ರಾಣವೇ ಬಂದಂತೆ ಇದ್ದ. ಶಿವಭಕ್ತರು ಕೊಂಡು ಒಕ್ಕಮಿಕ್ಕಪ್ರಸಾದವನ್ನು ಸ್ವೀಕರಿಸುತ್ತಿದ್ದ. ತಿರುನೀಲಕಂಠರು, ಸೌಂದರನಂಬಿ ಭಕ್ತಿಪಥ ಗರಗಸದಂತೆ ಎಂದು ಕಂಡುಕೋಂಡವರು. ಶಿವ ಇವರನ್ನು ಕಾಡಿನೋಡಿದ. ಬೇಡಿನೋಡಿದ ಅರಿದುನೋಡಿದ. ಅವನ ಭಕ್ತಿಯಬರೆಗಲ್ಲಿನಿಂದ ಇವರು ಪುಟವಿಟ್ಟ ಚಿನ್ನ. ಶಿವ ಇವರೊಂದಿಗೆ ಸರಸಮಾಡಿದ. ತಾನು ನಲಿದು ಭಕ್ತರನ್ನು ನಲಿಸಿದ.

63 ಪುರಾತನರ ಬದುಕು ಮರ್ತ್ಯವನ್ನು ಶಿವನಸೊಲಿಸುವ ಭೂಮಿಯೆಂದು ತಿಳಿದು ಬದುಕಿದ ಬದುಕಾಗಿದೆ. ಅಪ್ಪಾರ್ ಸಂಬಂಧಾರ್ ಇವರು ಜೈನ ಬೌದ್ಧರನ್ನು ವಾದದಲ್ಲಿ ಸೋಲಿಸಿ ಶೈವಧರ್ಮದ ಸುಭದ್ರತೆಗಾಗಿ ನಾಡಿನ ತುಂಬೆಲ್ಲ ತೀರ್ಥಯಾತ್ರೆ ಕೈಗೊಂಡರು. ಅಪ್ಪಾರ್‌ರು 126 ಕ್ಷೇತ್ರಗಳನ್ನು ಸಂಬಂಧಾರ್ ಅವರು 216 ಕ್ಷೇತ್ರಗಳನ್ನು ಸಂದರ್ಶಿಸಿ ಅವುಗಳನ್ನು ಕುರಿತು ತೇವಾರಂಗಳನ್ನು ಹಾಡಿ ಶಿವಭಕ್ತಿಯನ್ನು ಪ್ರಚೋದನೆಗೊಳಿಸಿದರು[30] ಸಂಬಂಧಾರ್ ಅವರಿಗೆ ಪಾಂಡ್ಯದೊರೆಯ ನೆಡುಮಾರನ್ ಪತ್ನಿ ರಾಣಿಮಹದೇವಿ ಮತ್ತು ಮಂತ್ರಿ ಕಲಚ್ಚುರಿಯರ ಸಹಾಯ ತುಂಬ ಅಮೂಲ್ಯವಾದುದು. ಒಟ್ಟು 63 ಪುರಾತನರು ಬದುಕಿದ ಕಾಲಾವಧಿಯನ್ನು, ಅವರ ಪ್ರಚಾರ ಕಾರ್ಯವನ್ನು ನಾಲ್ಕು ವಿಭಾಗವಾಗಿ ವಿಂಗಡಿಸಬಹುದು. 1. 5 ಮತ್ತು 7ನೇ ಶತ

---

28. ಅಪ್ಪೂತಿ ಅಡಿಯರರು, ಶಿವಶರಣ ಸಂಪುಟ (ಸಂ. ಎಚ್. ದೇವಿರಪ್ಪ) ಪುಟ 10.
29. ಮೆರೆಮಿಂಡದೇವರು, ಶಿವಶರಣ ಸಂಪುಟ (ಸಂ. ಎಚ್. ದೇವಿರಪ್ಪ) ಪುಟ 69.
31. ತ್ರಿಷಷ್ಠಿ ಪುರಾತನರ ಚಾರಿತ್ರ, ಪ್ರಸ್ತಾವನೆ (ಸಂ. ಆರ್. ಸಿ. ಹಿರೇಮಠ) ಪುಟ 37.

ಮಾನದಲ್ಲಿ ಅಪ್ಪಾರ್, ಸಂಬಂಧಾರ್ ಪೂರ್ವದಲ್ಲಿ 17 ಪುರಾತನ ಶರಣರು. 7ನೇ ಶತಮಾನದ ಮಧ್ಯಭಾಗದಲ್ಲಿ ಅಪ್ಪರ್, ಸಂಬಂಧರ್ ಸಮಕಾಲೀನದಲ್ಲಿ 11 ಪುರಾತನ ಶರಣರು. 3. 7ನೇ ಶತಮಾನದ ಮಧ್ಯಭಾಗದಿಂದ 8 ನೇ ಶತಮಾನದ ಮಧ್ಯಭಾಗದವರೆಗೆ ಸಂಬಂಧರ್, ಸುಂದರಮೂರ್ತಿಗಳ ನಡುವಣ ಕಾಲದಲ್ಲಿ 22 ಪುರಾತನ ಶರಣರು. 4. ಸುಂದರಮೂರ್ತಿಗಳ ಸಮಕಾಲೀನದಲ್ಲಿ 9ನೇ ಶತಮಾನದ ಮಧ್ಯಭಾಗದವರೆಗೆ 13 ಪುರಾತನ ಶಿವಶರಣರು ಆಗಿ ಹೋಗಿದ್ದಾರೆ.[32] ಈ ಪುರಾತನರ ಪ್ರಭಾವ ವಚನಕಾರರ ಮೇಲೆ ಆದ ವಿವರ ಹೋಲಿಕೆಗಳು ಬೇರೊಂದು ಅಧ್ಯಾಯದಲ್ಲಿ ಬರುತ್ತವೆ.

**ಪ್ರಾಟೆಸ್ಟೆಂಟ್ ಪಂಥ**

ಪ್ರಾಟೆಸ್ಟೆಂಟ್ ಪಂಥ ಉಗಮವಾಗಲಿಕ್ಕೆ ಕಾರಣ ರೋಮನ್ ಕ್ಯಾಥೊಲಿಕ್ ಪಂಥದ ಶಾಷ್ಕ ಧಾರ್ಮಿಕ ಆಚರಣೆಗಳು ಕಾರಣ ಆಗಿವೆ. ಮೂಲತಃ ಬೈಬಲ್ ಮತ್ತು ಕ್ರಿಸ್ತನ ಉಪದೇಶಾವಳಿಯನ್ನು ಸರಿಯಾಗಿ ಅಧ್ಯಯನ ಮಾಡದೆ ಅವುಗಳಂತೆ ನಡೆಯದ ಭೋಗಜೀವನ ಮತ್ತು ಚಾರಿತ್ರ್ಯ ಹೀನವಾದ ಬದುಕು ಸಾಗಿಸಿದ ಪಾದ್ರಿಗಳಿಂದಾಗಿ ಚರ್ಚು ಮತ್ತು ಪಾದ್ರಿ, ಪೋಪುಗಳ ದುಷ್ಟ ಚರಿತ್ರ ಜನರಲ್ಲಿ ಆ ಮುಂಚೆ ಅಸಮಾಧಾನ, ವಿರೋಧಗಳನ್ನು ಬೆಳೆಸಿತ್ತು. ಪಾದ್ರಿಗಳ ಹೊಲಸು ಬದುಕು ಮಿತಿಮೀರುತ್ತ ಹೋದಂತೆಲ್ಲ, ಸರಿಯಾದ ಅನುಯಾಯಿಗಳಿಗೆ ಚರ್ಚು ಮಾನ್ಯಮಾಡದೆ ಅವಹೇಳನ ಮಾಡುತ್ತಿದ್ದರಿಂದ ಹೊಸಪಂಥದ ಮೂಲಕ ಪ್ರಾಟೆಸ್ಟೆಂಟ್ ಪಂಥಕ್ಕೆ ಬಾಗಿಲು ತೆರೆಯಿತು. ಪ್ರಾಟೆಸ್ಟೆಂಟ್ ಪಂಥಕ್ಕೆ ಬಾಗಿಲು ತೆರೆದ ವ್ಯಕ್ತಿ ಮಾರ್ಟಿನ್ ಲೂಥರ್. ಮಹಾನುಭಾವಿ ಮೇಲಾಗಿ ಅಧ್ಯಯನದ ಶ್ರೀಮಂತಿಕೆ ಉಳ್ಳ ಪ್ರಾಧ್ಯಾಪಕ. ಬೈಬಲ್, ಕ್ರಿಸ್ತನ ಉಪದೇಶಾವಳಿಗಳನ್ನು ಆಳವಾಗಿ ಅಧ್ಯಯನ ಮಾಡಿದವ ಈತ. ದೇವರು ಕರುಣಾಮಯಿ. ಆತನನ್ನು ಕ್ರಿಸ್ತನ ಉಪದೇಶಾವಳಿ, ತತ್ವಗಳ ಹಾದಿಯಲ್ಲಿ ತುಂಬ ಸುಲಭವಾಗಿ ಒಲಿಸಿಕೊಳ್ಳಬಹುದು ಎಂದು ನಂಬಿದವ ಈತ. ದೇವನ ಬಗೆಗೆ ವಿವಿಧವಾಗಿ ಪ್ರಾರ್ಥನಾ ಪದ್ಯಗಳನ್ನು ಹಾಡಿ ಹಂಬಲಿಸಿ ಆತನ

32. ಅದೇ, ಪುಟ 11.

ಅನುಗ್ರಹಕ್ಕಾಗಿ ಪರಿತಪಿಸಿದ ವ್ಯಕ್ತಿ ಈತ. ಈತನ ಈ ಹಂಬಲಕ್ಕೆ ರೋಮನ್ ಕ್ಯಾಥೋಲಿಕ್ ಪಂಥದ ಕೆಲ ಅನುಯಾಯಿಗಳು ಒಪ್ಪಿಗೆ ನೀಡಿದರು. ದೊರೆಯೊಬ್ಬನ ಬೆಂಬಲವೂ ದೊರೆತು ಈತ ಏನೆಲ್ಲ ಅಡ್ಡಿ ಬಂದರೂ ಅವುಗಳಿಗೆ ಸೊಪ್ಪು ಹಾಕದೆ ಮುಂದುವರಿದ. ರಾಜಾರಾಮ್ ಮೋಹನ್‌ರಾಯ್ ಬ್ರಹ್ಮ ಸಮಾಜದಮೂಲಕ ಹಿಂದೂಗಳನ್ನು ಮರಳಿ ವೇದ, ಉಪನಿಷತ್ತುಗಳ ವೈದಿಕ ಪರಂಪರೆಯ ಬಗ್ಗೆ ಆಸಕ್ತಿ, ಶ್ರದ್ಧೆ, ನಂಬಿಕೆ ಬೆಳೆಸಲು ತೊಡಗಿದಂತೆ ಮಾರ್ಟಿನ್ ಲೂಥರ್ ಬೈಬಲ್ ಮತ್ತು ಕ್ರಿಸ್ತನ ತತ್ವಗಳ ಬಗೆಗೆ ಹೆಚ್ಚು ಶ್ರದ್ಧೆ, ತಿಳಿವಳಿಕೆ ಮೂಡಿಸಲು ನೆರವಾದ.

**ಮಾರ್ಟಿನ್ ಲೂಥರ್**

ಮಾರ್ಟಿನ್ ಲೂಥರನ ಕಾಲದಲ್ಲಿ ಕ್ಯಾಥೊಲಿಕ್ ಪಾದ್ರಿಗಳ ದುರಾಚಾರಗಳಿಂದಾಗಿ ಕ್ರೈಸ್ತಧರ್ಮ ಪುನರುಜ್ಜೀವನ ಪಡೆಯುವುದು ಅಗತ್ಯವಾಗಿತ್ತು. ಚರ್ಚು ಪೋಪುಗಳ ಕಾರಣವಾಗಿ ಅಧಃ ಪತನ ಹೊಂದಿತ್ತು. ಪಾದ್ರಿಗಳು ತಮ್ಮ ಮತ್ತು ಚರ್ಚಿನ ಪಾವಿತ್ರ್ಯವನ್ನು ಎಲ್ಲ ರೀತಿಯಿಂದಲೂ ಕಳೆದುಕೊಂಡಿದ್ದರು. ಧರ್ಮಶ್ರದ್ಧೆ, ಕ್ರೈಸ್ತಮತ ತತ್ವಗಳ ಆಚರಣೆ ಇದು ಮತ್ತೆ ಜೀವ ಪಡೆಯಬೇಕಾದ ಪರಿಸ್ಥಿತಿ ಒದಗಿಬಂತು. ಕ್ರೈಸ್ತಧರ್ಮಕ್ಕೆ ಪುನರುಜ್ಜೀವನವನ್ನು ಉಂಟುಮಾಡಲು ಮಾರ್ಟಿನ್‌ಲೂಥರ್ ಎಲ್ಲ ರೀತಿಯಿಂದಲೂ ಅರ್ಹವ್ಯಕ್ತಿಯಾಗಿದ್ದ. ಸೇಂಟ್ ಅಗಸ್ಟಿನ್, ವಿಲಿಯಮ್ ಓಕ್‌ಹ್ಯಾಮ್, ಬರ್ನಾರ್ಡ್ ಕೈರ್‌ವಾಕ್ಸ್ ಮತ್ತಿತರ ಧಾರ್ಮಿಕತತ್ವ ಶಾಸ್ತ್ರಜ್ಞರ ಪ್ರಭಾವಲಯದಲ್ಲಿ ಮಾರ್ಟಿನ್ ಲೂಥರ್ ಧರ್ಮದ ನೆಲೆಗಟ್ಟನ್ನು ಅರಿಯಲು ಪ್ರಯತ್ನಿಸಿದ್ದ.

ಗಣಿಯಲ್ಲಿ ಕೆಲಸಮಾಡುವ ಬಡಕುಟುಂಬದ ತಂದೆ ತಾಯಿಗಳಿಗೆ ನವೆಂಬರ್ 10, 1483 ರಲ್ಲಿ ಜರ್ಮನಿಯ ಸಾಕ್ಸನಿ ಬಳಿಯ ಎಲಿಬನ್‌ನಲ್ಲಿ ಜನಿಸಿದ. ಹ್ಯಾನ್ಸ್‌ಮತ್ತು ಮಾರ್ಗರೇಟ್ ದಂಪತಿಗಳಿಗೆ ಎರಡನೆಯ ಮಗುವಾಗಿ ಜನಿಸಿದ.[33] ಎಂಟುಮಕ್ಕಳನ್ನುಪಡೆದ ಈ ತಂದೆ ತಾಯಿಗಳು ಆರ್ಥಿಕವಾಗಿ ಸುಸ್ಥಿಯಲ್ಲಿಲ್ಲದ್ದರಿಂದ ಮಾರ್ಟಿನ್ ಲೂಥರನ ಬಾಲ್ಯ ಅಷ್ಟೇನೂ ವಿಶಿಷ್ಟವಾದದ್ದಲ್ಲ. ದುಃಖವೂ ಇಲ್ಲದ ಸುಖವೂ ಇಲ್ಲದ ಸಾಧಾರಣ ರೀತಿಯಲ್ಲಿ ಅವನ ಬೆಳವಣಿಗೆ ಆಯಿತು. ಹ್ಯಾನ್ಸ್ ತನ್ನ ಜೀವಿತಾವಧಿಯ ಕಾಲದಲ್ಲಿ ಕುಶಲ ಕಾರ್ಮಿಕಪಂತದಿಂದ

33. ಎಚ್. ಡೇನಿಯಲ್ ರಾಪ್ಸ್ : ದಿ ಪ್ರಾಟೆಸ್ಟೆಂಟ್ ರಿಫರ್ಮೇಷನ್, ಪುಟ 281.

ಕಾರ್ಮಿಕರ ಮುಖ್ಯಸ್ಥನಾಗಿ ಬಡ್ತಿಪಡೆದ. ನಂತರ ತಾನೇ ಎರಕ ಹೊಯ್ಯುವ ಸಣ್ಣ ಕಾರ್ಖಾನೆಯೊಂದರ ಮಾಲೀಕನಾದ. ಲೂಥರ್‌ನ ತಾಯಿ ಧಾರ್ಮಿಕ ಆಚರಣೆಗಳಲ್ಲಿ ಶ್ರದ್ಧೆಯುಳ್ಳ ಸಾಧ್ವಿಮಣಿ.

ಲೂಥರ್ 1501 ರಲ್ಲಿ ಎರ್‌ಫರ್ಟ್ ವಿಶ್ವ ವಿದ್ಯಾಲಯದಲ್ಲಿ ಅಧ್ಯಯನ ನಡೆಸಿ ಸ್ನಾತಕೋತ್ತರ ಪದವಿ ಪಡೆದ. ಲಾಯರ್ ಆಗಬೇಕೆಂದು ಲಾ ಪದವಿ ಪಡೆಯಲು ಯೋಚಿಸಿದ್ದ ಲೂಥರ್ ಅದನ್ನು ಕೈಬಿಟ್ಟು ಧಾರ್ಮಿಕ ಪರಿವಲಯುವನ್ನು ಅಧ್ಯಯನ ಮಾಡತೊಡಗಿದ. ಪಶ್ಚಿಮ ಯೂರೋಪಿನಾದ್ಯಂತ ಧಾರ್ಮಿಕ ಪುನರುಜ್ಜೀವನದ ಅಗತ್ಯಇದ್ದದ್ದು ಆ ಬಗ್ಗೆ ಚಟುವಟಿಕೆ ನಡೆಯುತ್ತಿದ್ದುದು ಇವನ ಗಮನಕ್ಕೆ ಬಂತು. ಈ ದಿಸೆಯಲ್ಲಿ ಆಳವಾಗಿ ಅಧ್ಯಯನ ನಡೆಸಿ ಧರ್ಮಶಾಸ್ತ್ರದಲ್ಲಿ ಡಾಕ್ಟರೇಟ್ ಪದವಿ ಪಡೆದ. ನಂತರ ವಿಟ್ಟೆನ್ ಬರ್ಗ್‌ನಲ್ಲಿ ಈತನನ್ನು ಪ್ರಾಧ್ಯಾಪಕನನ್ನಾಗಿ ನೇಮಿಸಲಾಯಿತು. ಈತ ಆ ಕಾಲಾವಧಿಯಲ್ಲಿ ತನ್ನ ಅಧ್ಯಯನಗಳ ಪ್ರವಚನ ಮತ್ತು ಉಪನ್ಯಾಸದಿಂದಾಗಿ ದಿನೇದಿನೇ ಹೆಚ್ಚು ಬೆಳಕಿಗೆ ಬಂದ. ಕೇವಲ ಬೋಧನೆಯ ಹಂತದಲ್ಲಿದ್ದ ಲೂಥರ್ ಜಿಲ್ಲೆಯ ಪ್ರತಿನಿಧಿಯಾಗಿ ಧಾರ್ಮಿಕ ತತ್ವಗಳು ಕ್ರೈಸ್ತಮತಕ್ಕೆ ದೂರವಾಗಿದ್ದದನ್ನು ಅರಿತುಕೊಂಡ. ತನ್ನ ಉಪದೇಶಗಳಲ್ಲಿ ಪೆಡಸು ಭಾಷೆ ಬಳಸದೆ ಸರಳ ಮತ್ತು ನೇರವಾಗಿ ಚಂದ ಉದಾಹರಣೆಗಳ ಮೂಲಕ ಜನರನ್ನು ಸೆಳೆದ. ಹದಿನಾರು ಸಾವಿರಕ್ಕೂ 34 ಹೆಚ್ಚು ವಿದ್ಯಾರ್ಥಿಗಳು ಈತನ ಬೋಧನೆಯನ್ನು ಕೇಳಿ ಆಕರ್ಷಿತರಾದರು. ಇವನ ಬೋಧನೆಗಳು ಪ್ರಸಿದ್ಧಿಗೆ ಬಂದಂತೆಲ್ಲಾ ಉತ್ತರ ಯುರೋಪಿನಲ್ಲೆಲ್ಲಾ ಮಾರ್ಟಿನ್ ಲೂಥರ್‌ನದೇ ಮಾತಾಯಿತು.

ಬೈಬಲ್ ಮತ್ತು ಕ್ರಿಸ್ತನ ಬೋಧನೆಗಳನ್ನು, ದೇವರು ಕರುಣಾಮಯಿಯೆಂಬುದನ್ನು, ಆತನನ್ನು ಒಲಿಸುವ ಹಾದಿ ಸರಳ ಮತ್ತು ಪರಿಶುದ್ಧ ಚಾರಿತ್ರ್ಯದಿಂದ ಕೂಡಿದ ಭಕ್ತಿಯುಳ್ಳದ್ದಾಗಿರಬೇಕೆಂದು ಆಧಾರ ಸಹಿತವಾಗಿ ತಿಳಿಸು

---

34. ದಿ ನ್ಯೂ ಕೇಂಬ್ರಿಡ್ಜ್ ಮಾಡ್ರನ್ ಹಿಸ್ಟರಿ ಸೀರಿಸ್, ದಿ ರೆಫರ್‌ಮೇಷನ್, ಪುಟ 70.

ತ್ತಿದ್ದ. ಪಾದ್ರಿಗಳು ಧಾರ್ಮಿಕವಾಗಿ ದಾರಿಬಿಟ್ಟು ನೈತಿಕವಾಗಿ ಪತನ ಹೊಂದುತ್ತ ವಿಲಾಸ ಅಹಂಕಾರಗಳಲ್ಲಿ ಮತ್ತರಾಗಿದ್ದರು. ಇವರ ಈ ನಡುವಳಿಗಳನ್ನು ಲೂಥರ್ ಪ್ರಶ್ನಿಸಿದ. ಹಣವಂತರಾದವರು ಪಾಪ, ಅನ್ಯಾಯಮಾಡಿದ್ದರೆ ಅವರಿಂದ ದುಡ್ಡು ತೆಗೆದುಕೊಂಡು ಪೂಜೆಯ ನೆವದಲ್ಲಿ ಪಾದ್ರಿಗಳು ಕ್ಷಮದಾನ ನೀಡುತ್ತಿದ್ದರು. ಅದೇ ಪರಿಶುದ್ಧ ಮನಸ್ಸು, ಪ್ರಾಮಾಣಿಕರಾದ ಬಡವರು ಬಂದರೆ ಅತ್ತ ಸರಿಸುತ್ತಿದ್ದರು. ಅವರಿಗೆ ಪೂಜೆ, ಆರಾಧನೆಗಳಲ್ಲಿ ಭಾಗ ವಹಿಸಲು ಅಷ್ಟು ಅವಕಾಶ ಕೊಡುತ್ತಿರಲಿಲ್ಲ. ಪೋಪ್ ಆಗಿದ್ದವರು ಹಸುವಿನ ವೇಷದ ಹೆಬ್ಬುಲಿಗಳಾಗಿದ್ದರು. ಮಾಡುವುದು ಅನಾಚಾರವಾಗಿ ಮನೆ ಸುತ್ತ ವೃಂದಾವನ ಕಟ್ಟುವವರಾಗಿದ್ದರು. ಪಾದ್ರಿಗಳು, ಕ್ರೈಸ್ತರ ಧರ್ಮ ಗುರುಗಳು ಪೂಜೆ, ಆರಾಧನೆಯಲ್ಲಿ ಕಾಲಕಳೆಯದೆ ವಿಷಯಸುಖ, ಲೋಕ ವ್ಯವಹಾರಗಳಲ್ಲಿ, ಕೆಟ್ಟರಾಜಕೀಯದಲ್ಲಿ ಪಾಲುದಾರರಾಗಿದ್ದರು. ಹಣ ಸಂಗ್ರಹಿಸುವ ದಿಸೆಯಲ್ಲಿ ಇವರ ಬುದ್ಧಿಯೆಲ್ಲ ಖರ್ಚಾಗುತ್ತಿತ್ತು. ಧರ್ಮತತ್ವಗಳಿಗೆ ವಿರುದ್ಧದಿಕ್ಕಿನಲ್ಲಿ ಹಣಸಂಗ್ರಹಕ್ಕೆ ತೊಡಗಿದ್ದರು. ಕ್ರೈಸ್ತರ ಧರ್ಮಗುರು ಹತ್ತನೆ ಲಿಯೊ ಪಾಪ ಪರಿಹಾರ ಪತ್ರ ಮಾರಾಟಮಾಡಲು ಟೆಟ್ಸೆಲ್ ಎಂಬ ಪಾದ್ರಿಯನ್ನು ನೇಮಿಸಿದನು. ಈತ ತಮ್ಮ ಗುರು ಒಂದು ಹೇಳಿದರೆ ಹತ್ತು ಮಾಡುವ ವಿಪರೀತದವನಾಗಿದ್ದ.

1517ರ ಅಕ್ಟೋಬರ್ 31 ರಂದು ಧರ್ಮಗುರುವಿನ ಅಧಿಕಾರದ ಬಗೆಗೆ 95 ಆಕ್ಷೇಪಣೆಗಳನ್ನು ಬರೆದು ವಿಟ್ಟನ್ ಬರ್ಗ್‌ನ ಚರ್ಚ್‌ನಲ್ಲಿ ತೂಗು ಹಾಕಿದ. ನಂತರ ಇದನ್ನು ಜರ್ಮನ್ ಭಾಷೆಗೆ ಭಾಷಾಂತರಿಸಲಾಯಿತು.ಜರ್ಮನಿಯ ಇತರೆಲ್ಲ ಭಾಷೆಗಳಿಗೆ ಆಗತಾನೆ ಸ್ಥಾಪಿತಆಗುತ್ತಿದ್ದ ಮುದ್ರಣ ಮಳಿಗೆಯವರು ಯುರೋಪಿನಾದ್ಯಂತ ಪ್ರಚಾರಮಾಡಿದರು.[35] ಇದರ ಪರಿಣಾಮವಾಗಿ ಯುರೋಪಿನಾದ್ಯಂತ ಲಿಯೋನ ದುಶ್ಚಾರಿತ್ರಗಳು ಬೀದಿಮಾತಾದವು. ಲೂಥರನ ಈ ಆಕ್ಷೇಪಣೆಗಳನ್ನು ಜನರು ಅರಿತುಕೊಂಡರು. ಸಮರ್ಥಿಸ ತೊಡಗಿದರು. ಇನ್ನು ಕೆಲವರು ಹಣದಾಶೆಗಾಗಿ ಧರ್ಮತತ್ವಗಳ ತಳಹದಿಯಲ್ಲಿ ಈ

35. ದಿ ವರ್ಲ್ಡ್ ಬುಕ್ ಎನ್‌ಸೈಕ್ಲೊಪೀಡಿಯು, ಸಂಪುಟ 10.

ವೇಷ ತೊಟ್ಟಿದ್ದಾನೆಂದು ಆಡಿಕೊಂಡರು. ಎಲ್ಲ ಚರ್ಚುಗಳಲ್ಲಿಯೂ ಮಾರ್ಟಿನ್ ಲೂಥರ್ ಪಾದ್ರಿಗಳ ಕೇಂದ್ರ ವಸ್ತುವಾದ. ಆತನ ಚರ್ಚು ಮತ್ತು ಬೈಬಲ್ ಗಳ ಅಧ್ಯಯನ ಮತ್ತು ವಾದ, ವೈಖರಿಗಳು ಪೂರ್ವ ಯೋಜಿತವಾಗಿ ಸಮ್ಮತ ಪಡೆದಿದ್ದ ಕ್ಯಾಥೊಲಿಕ್ ತತ್ವಾಚರಣೆಗಳನ್ನು ಅಗೆದು ಅಂಗಡಿ ಇಟ್ಟವು.

ಅದರ ಪರಿಣಾಮವಾಗಿ ಚರ್ಚಿನಿಂದ ಲೂಥರ್‌ಗೆ ಬಹಿಷ್ಕಾರ ಹಾಕಲಾಯಿತು. ಅಲ್ಲದೆ ಹತ್ತನೇ ಲಿಯೋ ತನ್ನ ಧರ್ಮಗುರುಸ್ಥಾನದಿಂದ ಧರ್ಮ ಶಾಸನವೊಂದನ್ನು ಬರೆದು ಲೂಥರನ ಚಟುವಟಿಕೆಗಳನ್ನು ತೀವ್ರವಾಗಿ ಖಂಡಿಸಿದ್ದಲ್ಲದೆ ಆಜ್ಞೆ ಹೊರಡಿಸಲಾಯಿತು. ಇದಕ್ಕೆ ವಿರುದ್ಧವಾಗಿ ಲೂಥರ್ ತೊಡಗಿ ಡಿಸೆಂಬರ್ 10, 1520 ರಲ್ಲಿ ಹತ್ತನೇ ಲೂಯಿ ಕಳಿಸಿದ್ದ ಆಜ್ಞಾಪತ್ರವನ್ನು ಬಹಿರಂಗವಾಗಿ ಸುಟ್ಟನು. ನಂತರ ಅದೇ ವೇದಿಕೆಯ ಮೇಲೆ ಸಾರ್ವಜನಿಕವಾಗಿ ಈ ಬಗ್ಗೆ ಕೆಲವು ನಿರ್ಣಾಯಕವಾದ ಕೊನೆಯ ಮಾತುಗಳನ್ನು ಹೇಳಿದನು. "ನನ್ನ ಆತ್ಮ ಸಾಕ್ಷಿಯಾಗಿ ಬೈಬಲ್ ಗ್ರಂಥದ ಆಧಾರದಂತೆ ನಾನು ನಡೆದುಕೊಂಡಿದ್ದೇನೆ. ದೇವರೇ ನೀನೇ ನನಗೆ ಸಹಾಯ ಮಾಡು"[37] ಎಂದು ಪ್ರಾರ್ಥನೆ ಮಾಡಿದನು. ಲೂಥರನು ಪತ್ರ ಸುಟ್ಟ ದಿಟ್ಟಹೆಜ್ಜೆಯೇ ರೋಮನ್ ಕ್ಯಾಥೊಲಿಕ್‌ರ ವಿರೋಧವಾಗಿ ಹೊಸ ಪಂಥವೊಂದನ್ನು ಸ್ಥಾಪಿಸುವನೆಂಬುದಕ್ಕೆ ನಾಂದಿಯಾಯಿತು.

ಲೂಥರ್ ಒಂದು ಕಡೆ ತನ್ನ ಧಾರ್ಮಿಕ ಸುಧಾರಣೆಯ ಬಗೆಗೆ ಹೀಗೆ ಹೇಳಿಕೊಂಡಿದ್ದಾನೆ. ಹಿಂದೆ ಆಗಿ ಹೋದ ಧಾರ್ಮಿಕ ಸುಧಾರಕರು ಬದುಕಿನ ಮೇಲೆ ದಾಳಿ ಮಾಡುತ್ತಿದ್ದರು. ನಾನು ಖಚಿತವಾಗಿ ಹುಸಿ ಧಾರ್ಮಿಕ ತತ್ವಗಳ ಮತ್ತು ಚರ್ಚಿನ ಪುರೋಹಿತಷಾಹಿ ವ್ಯವಸ್ಥೆಯನ್ನು ಪ್ರಶ್ನಿಸುತ್ತಿದ್ದೇನೆ. ಅವರು ಪಾದ್ರಿಗಳ ತಪ್ಪುಗಳನ್ನು ಮುಚ್ಚಿಕೊಳ್ಳುತ್ತಿದ್ದರು. ಪ್ರಶ್ನೆ ಮಾಡುತ್ತಿರಲಿಲ್ಲ. ನಾನಾದರೋ ಅವುಗಳನ್ನು ಪ್ರಶ್ನೆ ಮಾಡಿ ಅದಕ್ಕೆ ಪಶ್ಚಾತ್ತಾಪ ಪಡಬೇಕೆಂದೂ, ಪರಿಶುದ್ಧವಾದ ಹಾದಿಯಲ್ಲಿ ನಡೆಯ ಬೇಕೆಂದೂ ಹೇಳುತ್ತೇನೆ. ಅಲ್ಲದೆ ತಮಗೆ ತಾವೇ ದೊಡ್ಡವರೆಂದು ತಿಳಿದು ಹದ್ದು ಮೀರಿ ವರ್ತಿಸುವುದನ್ನು ವಿರೋಧಿಸಿಕೊಂಡು ತಮ್ಮಲ್ಲಿನ ಪ್ರತಿಯೊಂದು ಪಾಪಕರ್ಮಗಳಿಗೂ

---

37. ವರ್ಲ್ಡ್ ಯೂನಿವರ್ಸಿಟಿ ಎನ್‌ಸೈಕ್ಲೊಪೀಡಿಯಾ, ಸಂಪುಟ 12. ಪುಟ 4237.

ಪಶ್ಚಾತ್ತಾಪಪಟ್ಟು ಧರ್ಮಸಂಸ್ಕಾರದ ಮೂಲಕ ಪಾವನರಾಗಬೇಕೆಂದು ಘೋಷಿಸುತ್ತೇನೆ.[38]

ಚರ್ಚಿನ ಯಾವ ಕಾರ್ಯಕ್ರಮಗಳಲ್ಲಿಯೂ ಅಧಿಕೃತ ಪ್ರತಿನಿಧಿಯಾಗಿ ಭಾಗ ವಹಿಸಕೂಡದೆಂದು ಪೋಪ್ ಆಜ್ಞೆ ಹೊರಡಿಸಿದನು. ಅಲ್ಲದೆ ಧರ್ಮಗುರುಗಳ ಮೇಲೆ ಎಳ್ಳಷ್ಟು ಭಯ ಭಕ್ತಿ ಇಲ್ಲದೆಮಾಡಿರುವ ಹುಸಿ ಆರೋಪಗಳನ್ನು ಹಿಂತೆಗೆದುಕೊಂಡು ತಪ್ಪೊಪ್ಪಿಕೊಳ್ಳಬೇಕೆಂದು ತಿಳಿಸಲಾಯಿತು. ಅಲ್ಲದೆ ವಾವರ್ಮ್ ನಲ್ಲಿ ಸೇರಲಿರುವ ಎಲ್ಲ ರಾಜರುಗಳ ಮುಖಂಡರ ಸಮಕ್ಷಮದಲ್ಲಿ ಮಂತ್ರಾಲೋಚನೆಯ ಮುಂದೆ 10, ಏಪ್ರಿಲ್ 1521ರಲ್ಲಿ ಹಾಜರಾಗಬೇಕೆಂದು ತಿಳಿಸಲಾಯಿತು. ಆ ಸಭೆಯಲ್ಲಿ, ಆಗತಾನೆ ಚುನಾಯಿತನಾಗಿದ್ದ 5 ನೇ ಚಾರ್ಲ್ಸ್ ದೊರೆ, ಲೂಥರನು ಧರ್ಮ ಗುರುಗಳ ಮೇಲೆ ಮಾಡಿರುವ ಎಲ್ಲ ಆಪಾದನೆಗಳನ್ನು ಹಿಂತೆಗೆದುಕೊಳ್ಳಬೇಕೆಂದು ತಿಳಿಸಿದನು. ಅದಕ್ಕೆ ಲೂಥರನ ಉತ್ತರ ಹೀಗಿತ್ತು. "ಧರ್ಮತತ್ವಗಳ ಆಧಾರದಿಂದ ನನ್ನ ನಿರ್ಣಯಗಳನ್ನು ತಪ್ಪೆಂದು ಸಾಧಿಸದ ಹೊರತು ನಾನು ಹಿಂತೆಗೆದುಕೊಳ್ಳುವುದಿಲ್ಲ....ನನ್ನ ಪ್ರತಿಯೊಂದು ನಿರ್ಣಯಗಳು ಧರ್ಮಗ್ರಂಥದ ಆಧಾರದಿಂದ ಕೂಡಿದವುಗಳಾಗಿವೆ.....ನಾನು ಪಶ್ಚಾತ್ತಾಪ ಪಡುವುದೂ ಇಲ್ಲ. ಹಿಂತೆಗೆದುಕೊಳುವುದೂ ಇಲ್ಲ.[39]

ಈ ಮಾತುಗಳಿಂದ ಕ್ರುದ್ಧನಾದ ಚಾರ್ಲ್ಸ್‌ದೊರೆ ಲೂಥರನು ಧರ್ಮ, ದೇವರುಗಳಲ್ಲಿ ನಂಬಿಕೆಇಲ್ಲದವನೆಂದೂ, ಗುರು, ಹಿರಿಯರಲ್ಲಿ ಗೌರವ ಇಲ್ಲದವನೆಂದು ಟೀಕಿಸಿದನು. ಸಾಕ್ಸನಿಗೆ ಚುನಾಯಿತನಾಗಿದ್ದ ಲೂಥರನ ಮಿತ್ರ ಈ ಬಗ್ಗೆ ಚಾರ್ಲ್ಸ್‌ಗೆ ಭರವಸೆ ಕೊಟ್ಟಮೇಲೆ ಲೂಥರನನ್ನು ಮನೆಗೆ ಕಳಿಸಲಾಯಿತಲ್ಲದೆ ಶಿಕ್ಷೆಯ ಬಗ್ಗೆ ಮುಂದೆ ಯೋಚನೆಮಾಡುವಷ್ಟರಲ್ಲಿ ಲೂಥರನ ಮಿತ್ರ ಫ್ರೆಡರಿಕ್ ವಾಟುಂಬರ್ಗ್ ಎಂಬಲ್ಲಿ ಬಚ್ಚಿಟ್ಟ. ಫ್ರೆಡರಿಕನ ಈ ಮುಂದಾಲೋಚನೆಯ ರಕ್ಷಣೆಯಿಂದಾಗಿ ಲೂಥರ್ ಬದುಕುಳಿಯುವಂತಾಯಿತು. ಇಲ್ಲದಿದ್ದಲ್ಲಿ ಆತನನ್ನು ಅಮಾನುಷವಾಗಿ ಚಿತ್ರಹಿಂಸೆಯಿಂದ ಕೊಲ್ಲಲಾಗುತ್ತಿತ್ತು. ಪ್ರಾಟಿ

38. ದಿ ವರ್ಲ್ಡ್ ಬುಕ್ ಎನ್‌ಸೈಕ್ಲೊಪೀಡಿಯ, ಸಂಪುಟ 15, ಪುಟ 549.
39. ಅದೇ, ಮಾರ್ಟಿನ್ ಲೂಥರ್ ನೋಡಿ.

ಸ್ಟೆಂಟ್ ಪಂಥ ಉಗಮಕ್ಕೆ ಇನ್ನು ಕೆಲವುಕಾಲ ಮತ್ತೊಬ್ಬ ಮಹಾನುಭಾವಿಗೆ ದಾರಿ ನೋಡಬೇಕಾಗುತ್ತಿತ್ತು. ತಾನು ಗೋಪ್ಯವಾಗಿದ್ದಾಗ ಹತ್ತುತಿಂಗಳ ಕಾಲ ದಲ್ಲಿ ಗ್ರೀಕ್ ಭಾಷೆಯಲ್ಲಿದ್ದ ಬೈಬಲ್ಲನ್ನು ಜರ್ಮನರ ಜನಭಾಷೆಗೆ ಭಾಷಾಂತರಿಸ ತೊಡಗಿದ್ದ. ಈತನ ಈ ಕಾರ್ಯದಿಂದಾಗಿ ಜರ್ಮನಿಯ ಸಾಮಾನ್ಯರು ತಮ್ಮ ಭಾಷೆಯಲ್ಲಿಯೇ ಬೈಬಲ್ ಓದುವಂತಾಯಿತು.

ಮಹಾನುಭಾವಿಗಳ ಚೇತನ ಹೆಚ್ಚು ಕಾಲ ಗೋಪ್ಯವಾಗಿರುವಂತದಲ್ಲ. ಆಗುವುದೆಲ್ಲಾ ಆಗೇಬಿಡಲಿ ಎಂದು, ಆನೆಯ ಮೇಲೆ ಹೋಗುವವನ ಬೀದಿ ನಾಯಿ ಕಚ್ಚಲಾರದೆಂದೂ ಮಾರ್ಚ್, 1522 ರಲ್ಲಿ ಮತ್ತೆ ತನ್ನ ಚಟುವಟಿಕೆ ಆರಂಭಿಸಿದ. ವಿಟೆನ್‌ಬರ್ಗ್‌ಗೆ ಬಂದವನೆ ಮತ್ತೆ ಬೋಧನೆ, ಪ್ರವಚನಗಳನ್ನು ಮಾಡತೊಡಗಿದ. ಈ ಬಗ್ಗೆ ಜನಗಳಿಗೂ ಆ ಹೊತ್ತಿಗೆ ತಿಳಿವಳಿಕೆ ಬಂದಿತ್ತು. ಈತನ ಈ ಚಟುವಟಿಕೆಯನ್ನು ಸಾರ್ವಜನಿಕರು, ಅಧ್ಯಾಪಕರು, ವಿಧ್ಯಾರ್ಥಿ ಗಳು ಬೆಂಬಲಿಸಿದರು. ಇವರಸಂಖ್ಯೆ ಲೂಥರನ ಸಂಘಟನೆಯಿಂದ ಬೆಳೆಯತೊಡ ಗಿತು. ಇವರು ರೋಮನ್ ಕ್ಯಾಥೊಲಿಕರನ್ನು ಸಂಪೂರ್ಣವಾಗಿ ವಿರೋಧಿಸುವ ಚಳುವಳಿಯಲ್ಲಿ ದುಮುಕಿದರು. ಮಧ್ಯಮವರ್ಗದ ಜನತೆ, ವಿದ್ವಾಂಸರು, ಅಕ್ಷ ರಸ್ತರು. ಇದರಲ್ಲಿ ಹೆಚ್ಚು ಹೆಚ್ಚಾಗಿ ಭಾಗವಹಿಸಿದರು. ಈ ಕಾಲಾವಧಿಯೇ ಧಾರ್ಮಿಕ ಆಂದೋಲನದ ಪೂರ್ವಬೆಳೆಯಾಯಿತು. ಈ ನಕಾಲದಲ್ಲಿ ಜರ್ಚಿನ ಆಚರಣೆಗಳನ್ನು ಬೈಬಲ್‌ಗೆ ಅನುಗುಣವಾಗಿ ಹೊಸದಾಗಿ ಸಂಸ್ಥಾಪಿಸಿದ.

ಧಾರ್ಮಿಕವಾಗಿ ಸುಧಾರಣೆ ತರಹೊರಟ ಲೂಥರ್ ಬ್ರಹ್ಮಚಾರಿಯಾ ಗಿದ್ದು ಸನ್ಯಾಸಿಯಾಗ ಬಯಸಲಿಲ್ಲ. ಅಲ್ಲದೆ ಈ ಇಹಲೋಕದ ಸುಖವನ್ನು ತ್ಯಜಿಸಲೂ ಇಲ್ಲ. ಅದರ ಅವಶ್ಯಕತೆಯೂ ಇರಲಿಲ್ಲ. ಗೃಹಸ್ಥನಾಗಿದ್ದು ಕೂಡ ಕರುಣಾಮಯಿ ದೇವನನ್ನು ಪರಿಶುದ್ಧ ಜೀವನದಿಂದ ಒಲಿಸಿಕೊಳ್ಳಬಹುದೆಂದು ಸಾರಿದನು. ಆತನ ಗೃಹಸ್ಥ ಬದುಕು ತುಂಬ ಸಂತೋಷದಿಂದ ಕೂಡಿತ್ತು. ಆರುಮಕ್ಕಳುಗಳನ್ನು ಪಡೆದ ಲೂಥರ್ ಅನಾಥಮಕ್ಕಳುಗಳನ್ನು ತಂದು ತನ್ನ ಮಕ್ಕಳೊಂದಿಗೆ ಬೆಳೆಸಿದ. ಅಸಂಖ್ಯ ಕಡುಬಡತನದ ಮಕ್ಕಳಿಗೂ ಆಶ್ರಯ ನೀಡಿದ. ಈತನ ಈ ಚಟುವಟಿಕೆಗೆ ಆತನ ಪತ್ನಿ ಯಾವ ದೃಷ್ಟಿಯಿಂದಲೂ

ಪ್ರತಿಕೋಲೆಯಾಗಲಿಲ್ಲ. ನೆರವು ನೀಡಿದಳು.

ಲೂಥರನಿಗೆ ಫಿಲಿಪ್ ಮೆಲಾನ್ಸಿಲಾನ್ ಎಂಬ ಮತ್ತೊಬ್ಬ ಮಿತ್ರ ಆಂದೋಲನದ ದಿಸೆಯಲ್ಲಿ ನೆರವಾದ. 1534 ರಲ್ಲಿ ಬೈಬಲ್ಲನ್ನು ಸಂಪೂರ್ಣ ವಾಗಿ ಜರ್ಮನ್ ಭಾಷೆಗೆ ಅನುವಾದ ಮಾಡಿದ. ಈ ಸಂದರ್ಭದಲ್ಲಿ ಆತನ ಆರೋಗ್ಯ ಕೂಡ ತಕ್ಕಮಟ್ಟಿಗೆ ಮೊಂಡು ಹಿಡಿಯಿತು. ಆದರೂ ಬಿಡದೆ ಆತ 400 ಕ್ಕೂ ಹೆಚ್ಚು ಕೃತಿಗಳನ್ನು ಬರೆದ. ಇವುಗಳಲ್ಲಿ ಸಣ್ಣ ಕರಪತ್ರ, ಪುಸ್ತಕಗಳಿಂದ ಹಿಡಿದು ಬೈಬಲ್ ಅನುವಾದದಂತಹ ಕೃತಿಯುವರೆಗೂ ವ್ಯಾಪಿಸಿವೆ. ಮಾರ್ಟಿನ್ ಲೂಥರನ ಸುಧಾರಣೆ ಎರಡು ಹಂತದ್ದು. ರೋಮನ್ ಕ್ಯಾಥೊಲಿಕ್ ಗುರುಗಳಲ್ಲಿದ್ದ ದುಶ್ಚಾರಿತ್ರವನ್ನು ವಿರೋಧಿಸುವುದು. ಚರ್ಚು ಮತ್ತು ಧರ್ಮಗುರುಗಳಲ್ಲಿ ಪಾವಿತ್ರ್ಯತೆಯನ್ನು ಉಳಿಸಿಕೊಳ್ಳುವುದು. ಇದನ್ನು ತನ್ನ ಕೃತಿಗಳಲ್ಲಿ, ಪ್ರಾರ್ಥನೆಗಳಲ್ಲಿ ಭಾಷಣಗಳಲ್ಲಿ ಪ್ರಚಾರ ಮಾಡುತ್ತ ಬದುಕಿದ್ದಾನೆ.

## ಪ್ರಾಟೆಸ್ಟೆಂಟ್ ಪಂಥದ ಪ್ರಗತಿ

ಲೂಥರನ ನಾಯಕತ್ವದಲ್ಲಿ ಆರಂಭಗೊಂಡ ಪ್ರಾಟೆಸ್ಟೆಂಟ್ ಪಂಥ ಮಧ್ಯ ಕಾಲದ ಹೊತ್ತಿಗೆ ಯುರೋಪಿನಾದ್ಯಂತ ಪ್ರಚಾರ ಪಡೆದು ಅನುಯಾಯಿಗಳನ್ನು ಪಡೆಯಿತು. ಲೂಥರ್ ನನ್ನ ಎಲ್ಲ ತಪ್ಪುಗಳು ನನಗೆ ಕಾಣುವುದಿಲ್ಲ. ನೀವು ಇದನ್ನು ತಿದ್ದಬೇಕು ಎಂದು ಪ್ರಾಟೆಸ್ಟೆಂಟ್ ಪಂಥದ ಅನುಯಾಯಿಗಳಿಗೆ ಹೇಳುತ್ತಿದ್ದ. ಅಲ್ಲದೆ ದೇವನ ಸೃಷ್ಟಿಯಲ್ಲಿ ಯಾರೂ ಪಾಪಿಗಳಲ್ಲವೆಂದೂ ದೇವರು ಎಲ್ಲರಿಗೂ ಸಮಾನವಾಗಿ ತನ್ನ ಅನುಗ್ರಹ ದಯಪಾಲಿಸಿದ್ದಾನೆಂದೂ ತಿಳಿಸುತ್ತಿದ್ದ. ನೀವು ನಿಮ್ಮ ಮನ ಮೆಚ್ಚುವಂತೆ ನಡೆಯಿರಿ. ದೇವರು ಇದನ್ನು ಗಮನಿಸುತ್ತಾನೆ. ಮೆಚ್ಚುತ್ತಾನೆ ಎನ್ನುತ್ತಿದ್ದ. ಲೂಥರ್ ದೇವ ಸಿಂಧುತ್ವವನ್ನು ಪ್ರಶ್ನೆ ಮಾಡಿದವನಲ್ಲ. ಏಸುವನ್ನು ಅಲ್ಲಗಳೆದವನಲ್ಲ. ನಂಬಿದವನು. ನಮ್ಮ ಒಪ್ಪು ತಪ್ಪುಗಳನ್ನು ತೂಗಿ ನೋಡುವವ ಏಸುಕ್ರಿಸ್ತನೆಂದು ತಿಳಿದಿದ್ದ. ಅಂತೆಯೇ ಪ್ರಚಾರ ಮಾಡುತ್ತಿದ್ದ.

ಲೂಥರ್ ಹತ್ತನೇ ಲಿಯೋ ಧರ್ಮಗುರುವಿನ ಬಗೆಗೆ, ಚರ್ಚಿನ ಬಗೆಗೆ ಮಾಡಿದ್ದ ಆಪಾದನೆಗಳು ಮೂರು ರೀತಿಯವು. (1) ಆರ್ಥಿಕ ದುರಾಚಾರ:

ಧರ್ಮಗುರು ಜನತೆಯ ಕಡು ದಾರಿದ್ರ್ಯ, ನೋವುಗಳನ್ನು ಅರ್ಥಮಾಡಿಕೊಂಡಿದ್ದರೆ, ಸೇಂಟ್‌ಪೀಟರ್ ಜನಸುಖ ದೊರೆಯುವವರೆಗೆ ಬೂದಿ, ಧೂಳುಗಳ ನಡುವೆ ಇದ್ದು ಜನರ ಸಂಕಷ್ಟಗಳಿಗೆ ದುಡಿದಂತೆ ಧರ್ಮಗುರುವೂ ಆ ರೀತಿ ನಡೆಯಬೇಕು. ಅದು ಬಿಟ್ಟು ಅವರ ರಕ್ತ ಮಾಂಸದ ದುಡಿತದಿಂದಾದ ಭವ್ಯ ಬಂಗಲೆಯಲ್ಲಿ ವಾಸಿಸುವುದು ಧರ್ಮಬಾಹಿರವಾದುದು.

(2) ತತ್ವಗಳ ದುರಾಚಾರ: ದೇವರ ಕೃಪೆಗೆ ಪಾತ್ರರಾಗಿ ಸತ್ತವರ ಮೇಲೆ, ಧರ್ಮ ಗುರುವಿಗೆ ಯಾವ ನ್ಯಾಯ ಸಮ್ಮತವಾದ ಅಧಿಕಾರವೂ ಇಲ್ಲ. ಅವರ ಸಮಾಧಿ ಸ್ಥಳವನ್ನು ಯಾವ ಶುಲ್ಕವೂ ಇಲ್ಲದೆ ಬಿಟ್ಟುಕೊಡಬೇಕು. ಮತ್ತು ಆ ಅಧಿಕಾರವನ್ನು ತ್ಯಜಿಸಬೇಕು. ಇಷ್ಟಕ್ಕೂ ಆ ಹಿಡಿತ ಹೇರಿಕೆಯದೇ ಹೊರತು ಅಧಿಕಾರ ನಡೆಸುವಂತದಲ್ಲ. ಮೂರನೆಯದು ಧಾರ್ಮಿಕ ದುರಾಚಾರ: ಪಾದ್ರಿ ಅಥವಾ ಧರ್ಮಗುರುಗಳ ಒಡೆತನ ಬೊಕ್ಕಸದ ಮೇಲಲ್ಲವೇ ಅಲ್ಲ. ಆದರ ಒಡೆತನದಿಂದ ಪಾದ್ರಿಗಳಿಗೆ ದೋಷಾರೋಪಣೆ ತಪ್ಪಿದ್ದಲ್ಲ. ಅಲ್ಲದೆ ಅವರ ಒಡೆತನ ಮುಖ್ಯವಾಗಿ ಇರಬೇಕಾದ್ದು ಸುವಾರ್ತೆಗಳ ಮೇಲೆ, ಜ್ಞಾನದ ಬೊಕ್ಕಸದ ಮೇಲೆ. ಚರ್ಚಿನವರ ಕೋಷಾಗಾರ ಧರ್ಮತತ್ವಗಳ ಝಣತ್ಕಾರದಿಂದ ತುಂಬಿರಬೇಕು. ಲೂಥರನ ಈ ನಿರ್ಧಾರ ಹೇಳಿಕೆಗಳಲ್ಲಿ ಮೂರನೆಯದು ಅತ್ಯಂತ ಮುಖ್ಯವಾದುದು. ಪಾದ್ರಿ ಮತ್ತು ಚರ್ಚುಗಳನ್ನು ಹೇಗೆ ಪರಿಶುದ್ಧಗೊಳಿಸಬೇಕೆಂದು ಮತ್ತು ಯಾವ ಕಾರಣದಿಂದ ಅವರು ಅಪರಿಶುದ್ಧರಾಗುವರೆಂಬುದು ಲೂಥರನಿಗೆ ತಿಳಿದ ಸಂಗತಿಯಾಗಿತ್ತು. ಈತನ ಭೋಧನೆ ಮತ್ತು ತತ್ವಗಳಿಗೆ ರೈತರು ತಮ್ಮದೇ ಆದ ಅರ್ಥ ಕೊಟ್ಟುಕೊಂಡು ಸಾಮ್ರಾಜ್ಯಷಾಹಿಯ ವಿರುದ್ಧ ಪ್ರತಿಭಟಿಸಿ ಸಾಮಾಜಿಕ ಪುನರುಜ್ಜೀವನಕ್ಕೆ ಹಾತೊರೆದರು. ಲೂಥರ್ ಇವರ ಈ ತೆರೆದ ಚಳುವಳಿಗೆ ಎಳ್ಳಷ್ಟು ಬೆಂಬಲ ನೀಡಲಿಲ್ಲ. ಒಂದು ರೀತಿಯಲ್ಲಿ ಇದು ನಮ್ಮಲ್ಲಿ ಬಸವಣ್ಣ ರಾಜಕೀಯ ಕ್ಷೇತ್ರಕ್ಕೆ, ಅಧಿಕಾರಕ್ಕೆ, ರಾಜ್ಯ ವಿಸ್ತಾರಕ್ಕೆ ಬೆಂಬಲ ಕೊಡದೆ ವರ್ತಿಸಿದಂತಾಗಿದೆ. ಬಿಜ್ಜಳನ ತಮ್ಮ ? (ಮೊಮ್ಮಗ)ಕರ್ಣದೇವ ಪಟ್ಟ ಕಟ್ಟಬೇಕೆಂದು ಸಿದ್ಧರಾಮನಲ್ಲಿಗೆ ಬಂದ. ಸಿದ್ಧರಾಮ ನಿರಾಕರಿಸಿದ. ರಾಘವಾಂಕ ಸಿದ್ಧರಾಮ ಚರಿತ್ರವೆಲ್ಲಿಬ ರೆದಿರುವುದನ್ನು ಇಲ್ಲಿ ನೆನೆಯಬಹುದು.

ಲೂಥರನ್ ಅನುಯಾಯೀಗಳು ದೇಶ ಸ್ವತಂತ್ರವಾಗು ವದಿಸೆಯಲ್ಲಿ ತುಂಬ ಪ್ರಮುಖಪಾತ್ರ ವಹಿಸಿದರು. ರೋಮನ್ ಕ್ಯಾಥೊಲಿಕರ ವಿರುದ್ಧ ತಿರುಗಿಬಿದ್ದ, ಹೊಸದಾಗಿ ಸ್ಥಾಪಿತವಾಗುತ್ತಿದ್ದ ಚರ್ಚುಗಳು ಹೊಸ ರಾಜಕೀಯ ಆಳ್ವಿಕೆಯ ಸ್ಥಾಪನೆಗೂ ಪ್ರೇರಣೆ ನೀಡಿದವು. ಲೂಥರನ್ ಧಾರ್ಮಿಕ ಸುಧಾರಣೆ ಕಾರಣವಾಗಿ ಯುರೋಪ್ ಎರಡುಭಾಗವಾಯಿತು. ಕ್ಯಾಥೊಲಿಕರು ದಕ್ಷಿಣ ಯುರೋಪಿನಲ್ಲಿಯೂ ಪ್ರಾಟೆಸ್ಟೆಂಟರು ಉತ್ತರಯೂರೋಪಿನಲ್ಲಿಯೂ ಸ್ಥಾಪಿತರಾದರು. 16ನೇ ಶತಮಾನದ ಆರಂಭದಲ್ಲಿ ಪ್ರಾಟೆಸ್ಟೆಂಟ್ ಚರ್ಚುಗಳು ಮಾತ್ರವಲ್ಲದೆ ರೋಮನ್ ಕ್ಯಾಥೊಲಿಕ್ ಚರ್ಚುಗಳೂ ತಮ್ಮ ಆಚರಣೆ ಚಾರಿತ್ರದಲ್ಲಿ ಪರಿಷ್ಕರಣ ಗೊಂಡವು. ರೋಮನ್ ಕಾಥೊಲಿಕ್ ಧರ್ಮಗುರುಗಳ, ಚರ್ಚುಗಳ ದರಿದ್ರ ಚಾರಿತ್ರ್ಯಕ್ಕೆ ಬೇಸತ್ತ ಜನರು ಪ್ರಾಟೆಸ್ಟೆಂಟರಾಗುತ್ತಹೋದರು. ಅತ್ತ ಅನುಯಾಯಿಗಳಾಗಿ ಹೋಗುವುದನ್ನು ತಪ್ಪಿಸಲು ಕ್ಯಾಥೊಲಿಕರು, ಪಾದ್ರಿಗಳು ಪರಿಶುದ್ಧ ಜೀವನ ನಡೆಸಬೇಕಾಯಿತು. ಚರ್ಚುಗಳನ್ನು ಬೈಬಲ್ ಅನುಗುಣವಾಗಿ ಆಳವಡಿಸಬೇಕಾಯಿತು.

ಮುಖ್ಯ ಲೂಥರನಿಗೆ ಅವನ ಸಮಕಾಲೀನದಲ್ಲಿ ಸಿಕ್ಕಿದದೊಡ್ಡ ಬೆಂಬಲವೆಂದರೆ 8ನೇ ಹೆನ್ರಿಯದು. ಇಂಗ್ಲೆಂಡಿನರಾಜನಾದ ಈತ ಹದಿನಾರನೇ ಶತಮಾನದಲ್ಲಿದ್ದವ. ತನ್ನ ಹೆಂಡತಿ ಅರೆಗಾನಿನ ಕಾಥರೀನಳನ್ನು ತ್ಯಜಿಸಿ ಮತ್ತೊಬ್ಬಳನ್ನು ಮದುವೆಯಾಗಲು ಬಯಸಿದ. ಇದಕ್ಕೆ ರೋಮನ್ ಕ್ಯಾಥೊಲಿಕರ ಗುರು ಹತ್ತನೇ ಲಿಯೋನ ಸಮ್ಮತಿ ಬೇಕಾಗಿತ್ತು. ಕ್ಯಾಥರೀನ್ ಮತ್ತೊಬ್ಬ ಪ್ರಬಲದೊರೆ 5ನೇ ಚಾರ್ಲ್ಸ್‌ನ ಬಂಧು ಆಗಿದ್ದರಿಂದ ಧರ್ಮಗುರು ಸಮ್ಮತಿಕೊಡಲಿಲ್ಲ. 8ನೇ ಹೆನ್ರಿಗೆ ಒಬ್ಬಧರ್ಮಗುರುವಿನ ಬೆಂಬಲ ಬೇಕಿತ್ತು. ಕ್ಯಾಥೋಲಿಕರ ಧರ್ಮಗುರು ಸಮ್ಮತಿ ಕೊಡದ್ದಿದರಿಂದ ಕ್ಯಾಥೋಲಿಕರ ಗುರುವಿನ ಬಗೆಗೆ ಅಸಮಾಧಾನವಾಯಿತು. ಇತ್ತ ಲೂಥರ್‌ಕೂಡ ಕ್ಯಾಥೊಲಿಕ್ ಗುರುಗಳ ಮೇಲೆ ಹಲವು ಆಪಾದನೆಗಳನ್ನುಮಾಡಿ, ಹೊಸ ಮನ್ವಂತರಕ್ಕೆ ಕಾಲಿರಿಸತೊಡಗಿದ್ದ. ಲೂಥರ್ ಆ ದಿಸೆಯಲ್ಲಿ ಹೆಜ್ಜೆಯಿಟ್ಟು, ಪ್ರಾಟೆಸ್ಟೆಂಟ್ ಪಂಥಕ್ಕೆಕಾರಣನೂ ಆಗಿದ್ದ. 8ನೇ ಹೆನ್ರಿ ಲೂಥರನಿಂದ ಮತ್ತೊಬ್ಬ ಹೆಣ್ಣನ್ನು ಮದುವೆಯಾಗಲು ಮತ್ತು ಈ ಮುಂಚೆ ವಿವಾಹವಾಗಿದ್ದ ಪತ್ನಿಯನ್ನು ಬಿಡಲು ಒಪ್ಪಿಗೆ ಪಡೆದ. ತನ್ನ ವೈಯುಕ್ತಿಕ ಆಶೆಗಳಿಗೆ ಲೂಥರ್‌ನು ಬೆಂಬಲ ನೀಡಿದ್ದ

ರಿಂದ 8ನೇ ಹೆನ್ರಿ ಪ್ರಾಟೆಸ್ಟೆಂಟ್ ಅನುಯಾಯಿಯಾದ. ಮತ್ತು ಪ್ರಾಟೆಸ್ಟೆಂಟ್ ಪಂಥದ ಪ್ರಗತಿಗೆ ಬೆಂಬಲ ನೀಡಿದ. ಇಂಗ್ಲೆಂಡ್ ಪ್ರಾಟೆಂಸ್ಟೆಂಟ್ ದೇಶವಾಗಿ ಹೋಯಿತು.

ಲೂಥರನ್ ತತ್ವಗಳು ಸ್ವಿಡೀಷ್' ಡ್ಯಾನಿಷ್‌ದೊರೆಗಳಿಂದ ಪ್ರಚಾರ ಪಡೆದವು. 1520 ರಲ್ಲಿ ಸ್ವೀಡಿಷ್‌ದೊರೆ ಗಸ್ಟವಸ್‌ನು ಸ್ವೀಡನ್ ಮತ್ತು ಫಿನ್‌ಲೆಂಡ್ ದೇಶದ ಚರ್ಚುಗಳನ್ನು ವಶಕ್ಕೆ ತೆಗೆದುಕೊಂಡು ಪ್ರಾಟೆಸ್ಟೆಂಟಾ ತತ್ವಗಳನ್ನು ಪ್ರಚಾರಮಾಡಿದ. ಆ ದೇಶಗಳನ್ನು ಆಪಂಥದ ಅನುಯಾಯಿಗಳಾಗಿ ಪರಿವರ್ತಿಸಿದ. ನಾರ್ವೆಯ ಚಕ್ರವರ್ತಿ ಡೆನ್‌ಮಾರ್ಕ್ 1536ರಲ್ಲಿ ಡ್ಯಾನಿಷ್ ಮತ್ತು ನಾರ್ವೆಗಳಲ್ಲಿ ಲೂಥರನ ತತ್ವಗಳನ್ನು ಪ್ರಚಾರಮಾಡಲು ನೆರವಾದ. ಆ ದೇಶದವರು ಪ್ರಾಟೆಸ್ಟೆಂಟ್ ಅನುಯಾಯಿಗಳಾದರು.[41] ಪ್ರಾಟೆಸ್ಟೆಂಟ್ ತತ್ವಗಳು ಇಷ್ಟುಬೇಗ ಪ್ರಚಾರ ಪಡೆಯಲು ಅನುಯಾಯಿಗಳು ಸಹಾಯ ಆದಂತೆ ತತ್ವಗಳೂ ಉತ್ಕೃಷ್ಟವಾಗಿದ್ದವು. ದೇವ ಭಕ್ತರನಡುವೆ ಪಾದ್ರಿ ಬರುವುದು ಬೇಕಿಲ್ಲ. ದೇವನ ಅನುಗ್ರಹವನ್ನು ಭಕ್ತ ನೇರವಾಗಿ ಪಡೆಯಬಹುದು. ದೇವನ ಅನುಗ್ರಹ ಕ್ರಿಸ್ತನ ಮೂಲಕ ದೊರೆಯುತ್ತದೆ. ಕ್ರಿಸ್ತನೊಬ್ಬನೇ ದೇವದೂತ. ದೇವರು ಮಾತ್ರ ಮನುಷ್ಯನ ನ್ಯಾಯಾನ್ಯಾಯಗಳನ್ನು ನಿರ್ಣಯಿಸುತ್ತಾನೆ. ಆತ ತನ್ನ ಆನುಗ್ರಹದಿಂದ ನಮ್ಮನ್ನು ಸನ್‌ಮಾರ್ಗಕ್ಕೆ ಕಳಿಸುತ್ತಾನೆ. ಈ ತತ್ವಾಚರಣೆಗಳು ಜನರಿಗೆ ಹಿಡಿಸಿದವು. ಪ್ರಾಟೆಸ್ಟೆಂಟ್ ಪಂಥ ಮನುಷ್ಯನ ಗುಣಶೀಲ ಸ್ವಭಾವಗಳಿಗೆ ಮನ್ನಣೆ ನೀಡಿ ಸ್ಪೂರ್ತಿ ಕೊಟ್ಟಿತು. ಆತನ ದಿನನಿತ್ಯದ ಚಟುವಟಿಕೆಗೆ ಪ್ರೋತ್ಸಾಹ ನೀಡಿ ಪರಿಶುದ್ಧ ಚಾರಿತ್ರ್ಯ, ಶೋಷಣೆರಹಿತ ಬದುಕುಗಳಿಗೆ ಮನ್ನಣೆ ಇತ್ತವು. ತನ್ನ ಬದುಕಿಗೆ ತಾನೇ ಹೊಣೆಗಾರ ಎಂಬುದನ್ನು ಮನಗಾಣಿಸಿ ಎಲ್ಲ ಸ್ವಾತಂತ್ರವನ್ನು ನೀಡಿದವು. ಇದರಿಂದಾಗಿ ಪ್ರಾಟೆಸ್ಟೆಂಟ್ ಪಂಥ ಧಾರ್ಮಿಕ, ಸಾಮಾಜಿಕ, ಸಾಂಸ್ಕೃತಿಕ, ರಾಜಕೀಯ ಕ್ಷೇತ್ರಗಳಲ್ಲಿ ಪ್ರಭಾವಬೀರಿ ಎಲ್ಲ ಕಡೆಯಿಂದಲೂ ಬೆಂಬಲ ಪಡೆಯಿತು. ಅನುಯಾಯಿಗಳು ಹೆಚ್ಚಿದರು. 1970ರ ಅಧ್ಯಯನದ ಪ್ರಕಾರ ಈ ಪಂಥದ ಅನುಯಾಯಿಗಳು 68, 500, 00 ಇದ್ದಾರೆ. ಪ್ರಪಂಚದಾದ್ಯಂತ 15,700

41. ದಿ ವರ್ಲ್ಡ್ ಬುಕ್ ಎನ್‌ಸೈಕ್ಲೊಪೀಡಿಯ, ಸಂಪುಟ 16, ಪುಟ 188.

ಚರ್ಚುಗಳಿವೆ. ಹದಿನಾರನೇ ಶತಮಾನದಿಂದೀಚೆಗೆ ಉಂಟಾದ ಈ ಪಂಥ ಇಷ್ಟೊಂದು ಅನುಯಾಯಿಗಳನ್ನು ಪಡೆದಿರಬೇಕಾದರೆ ಮುಂದೆ ಇದು ಇನ್ನು ಬೆಳೆಯುವುರಲ್ಲಿ ಅನುಮಾನಇಲ್ಲ. ಅನುಯಾಯಿಗಳ ಸತತ ಪ್ರಯತ್ನ ಫಲ ಕೊಡುತ್ತಿದೆ.

ಲೂಥರ್ ಪ್ರಾರ್ಥನಾ ಗೀತೆಗಳನ್ನು ಬೈಬಲ್ ಜರ್ಮನ್ ಭಾಷೆಗೆ ಅನುವಾದಗೊಳಿಸಿದ. ಇತರೆ ಆಲೋಚನೆಗಳನ್ನು ಬರಹದಲ್ಲಿ ಹಿಡಿದಿಟ್ಟ. ಈ ಧಾರ್ಮಿಕ ಸಾಹಿತ್ಯ ಜರ್ಮನ್ ಭಾಷೆಯ ಮೇಲೆ ತುಂಬ ಪ್ರಭಾವಬೀರಿತು. ಬೈಬಲ್ ಭಾಷಾಂತರಿಸುವುದರಿಂದ ಲೂಥರನ್ ಕಣ್ಣ ಮುಂದಿದ್ದವರು ಜರ್ಮನಿ ಭಾಷೆ ಬಲ್ಲ ಸಾಮಾನ್ಯಜನ. ಅವರಿಗೆ ಅರ್ಥವಾಗುವಂತೆ ತಿಳಿಯಾಗಿ ಬರೆಯುವುದು ಅವಶ್ಯವಾಯಿತು. ವಚನಕಾರರು ವಚನಗಳನ್ನು ಅಚ್ಚ ಕನ್ನಡದಲ್ಲಿ ಬರೆದಂತೆ ಈತ ಅಚ್ಚ ಜರ್ಮನಿಯಲ್ಲಿಯೇ ರಚನೆಮಾಡಿದ. ಹೇಳುವುದು ಜನಗಳಿಗೆ ತಿಳಿಯಬೇಕು. ಅದಕ್ಕಾಗಿ ಚಂದ ಚಂದ ಉಪಮೆ ನೀಡಿ ಸ್ಪಷ್ಟಗೊಳಿಸುವುದು ಅನಿವಾರ್ಯ ಆಗಿತ್ತು. ಜನಪ್ರಿಯವಾದರೀತಿಯಲ್ಲಿ ಹೊಸಹೈಜರ್ಮನ್ ಎಂಬ ಶೈಲಿ ಲೂಥರ್‌ನಿಂದ ಉಂಟಾಯಿತು. ಇದು ನಂತರ ಸುಹಿತಿಗಳ ಮೇಲೆ ತುಂಬ ಪ್ರಭಾವ ಬೀರಿತು. ಭಾಷೆಯನ್ನು ಹೊಸರೀತಿಯಲ್ಲಿ ಬಳಸುವುದನ್ನು, ದುಡಿಸಿಕೊಳ್ಳುವುದನ್ನು ಲೂಥರ್ ಕಲಿಸಿದ.

ವಚನಕಾರರು ವಚನಗಳನ್ನು ಬರೆದು ಹಾಡಿಕೊಂಡಂತೆ ಲೂಥರ್ ಜರ್ಮನಿಭಾಷೆಯಲ್ಲಿ ಪ್ರಾರ್ಥನಾ ಗೀತಗಳನ್ನು ಬರೆದು ಹೊಸ ಪ್ರಕಾರವೊಂದನ್ನು ಸೃಷ್ಟಿಸಿದ. ವಚನಕಾರರ ಸಾಹಿತ್ಯಸೃಷ್ಟಿ ಅನುಭಾವ ಸಾಹಿತ್ಯ ಮೇಲೂ ಪ್ರಭಾವಬೀರುವ ಸತ್ವಪಡೆದಿದ್ದಂತೆ ಲೂಥರನ್ ಅನುಭಾವಸಾಹಿತ್ಯ ನಂತರದ ಜರ್ಮನಿಯ ಸಾಹಿತ್ಯದ ಮೇಲೆ ಪ್ರಭಾವ ಬೀರಿತು. ಲೂಥರನ್ ಈ ಪ್ರಾರ್ಥನಾಗೀತಗಳು, ಅನುಭಾವಸಾಹಿತ್ಯ ಯುರೋಪ್ ಸಾಹಿತ್ಯದಲ್ಲಿ ಶ್ರೇಷ್ಠ ಕೊಡುಗೆಯಾಗಿವೆ.

ಲೂಥರನ್ ಸಾಹಿತ್ಯಕೃಷಿ ಅನುಭಾವ ಸಾಹಿತ್ಯಕ್ಕಷ್ಟೆ ಮೀಸಲಾಗದೆ ಸಾಮಾಜಿಕ ಸ್ತರಗಳಿಗೂ ವ್ಯಾಪಿಸಿತ್ತು. ಬೈಬಲ್ಲಿನ ಕಥೆಗಳನ್ನು ಉಪಯೋಗಿಸಿ. ಕೊಂಡು ನಾಟಕ ಬರೆಯಬಹುದು ಎಂಬುದನ್ನು ಸ್ವತಃ ಬರೆದು ತೋರಿಸಿಕೊಟ್ಟ

ಇದರಿಂದ ಸ್ಫೂರ್ತಿಪಡೆದ ಜರ್ಮನ್ ನಾಟಕಕಾರರು ಸಮಕಾಲೀನಕ್ಕೆ ಅಳವಡಿಸಿಕೊಂಡು ಲೂಥರನ್ ತತ್ವ ಪ್ರಚಾರಕ್ಕಾಗಿ ಹಲವರು ನಾಟಕಗಳನ್ನು ಬರೆದರು. ಇವು ಆ ಮುಂಚಿನ ಸಾಂಪ್ರದಾಯಿಕ ನಾಟಕಗಳಿಂದ ತೀರ ಭಿನ್ನವಾಗಿ ಹೊಸ ದೃಷ್ಟಿಯನ್ನು ತಂದುಕೊಡುತ್ತವೆ. ಮೋಲಿಯೇರ್ ಇತ್ಯಾದಿ ನಾಟಕಕಾರರನ್ನು ಇಲ್ಲಿ ಸ್ಮರಿಸಬಹುದು.

ಲೂಥರನ್ ಧಾರ್ಮಿಕ ಆಂದೋಲನ ಧಾರ್ಮಿಕ ಕ್ಷೇತ್ರದಲ್ಲಿ ಮಾತ್ರವಲ್ಲದೆ, ಸಾಹಿತ್ಯ, ರಾಜಕೀಯ, ಸಾಂಸ್ಕೃತಿಕ ಕ್ಷೇತ್ರದಲ್ಲೂ ಬದಲಾವಣೆ ಮತ್ತು ಪ್ರಗತಿಯನ್ನು ತಂದಿತು.

## 1917 ರ ರಷ್ಯದ ಕ್ರಾಂತಿ

ಕ್ರಾಂತಿಯ ಎಲ್ಲ ಅರ್ಥಗಳನ್ನು ಈಚೆಗೆಳೆದದ್ದು ರಷಿಯದ ಕ್ರಾಂತಿಯೊಂದೇ. ಬದುಕಿನ ಎಲ್ಲ ಮುಖಗಳಲ್ಲಿ ಪ್ರಗತಿ, ಸುಧಾರಣೆ ತರುವುದರ ಮೂಲಕ ಕ್ರಾಂತಿ ತಲಪುವ ವ್ಯಾಪ್ತಿ, ವಿಸ್ತಾರಗಳಿಗೆ ಇದು ಸೊಗಸಾದ ಉದಾಹರಣೆಯಾಗಿದೆ. ಈ ಕ್ರಾಂತಿ ಯಶಸ್ವಿಯಾಗಲು 50 ವರ್ಷಕ್ಕೂ ಹೆಚ್ಚು ದೀರ್ಘವಾಗಿ ಯುದ್ಧ ಮತ್ತು ಹೋರಾಟ ನಡೆದಿದೆ. ಕ್ರಾಂತಿಯ ಉದ್ದೇಶ ಯಾವತ್ತೂ ಇವರಿಗೆ ಅಸ್ಪಷ್ಟವಾಗಿರಲ್ಲಿಲ್ಲ. ಅದರ ದಾರಿ, ಉದ್ದೇಶ, ಸ್ಥಾಪಿತವಾಗಬೇಕಾದ ಆಡಳಿತ ವ್ಯವಸ್ಥೆ ಎಲ್ಲವೂ ಪೂರ್ವಯೋಜಿತ. ಇದು ಸುಸಂಘಟಿತವಾಗಿ ಮತ್ತು ಅಪಾರ ರಕ್ತಪಾತ, ಹೆಣಗಳ ಉರುಳುವಿಕೆಯಿಂದ ರಕ್ತ ಬಸಿದು ಜಯವನ್ನು ಪಡೆಯಿತು. ಇದರ ನೇತಾರರು ಕಾರ್ಲ್‌ಮಾರ್ಕ್ಸ್ ಮತ್ತು ವ್ಲಾದಿಮರ್ ಇಲಿಚ್ ಲೆನಿನ್.

ಕಾರ್ಲ್‌ಮಾರ್ಕ್ಸ್‌ನ ಜೀವನವೆಲ್ಲ ಹೊಸ ಬದುಕಿಗೆ ಥಿಯರಿಯೊಂದನ್ನು ಕಂಡು ಹಿಡಿಯುವುದರಲ್ಲಿಯೇ ಮುಕ್ತಾಯವಾಯಿತು. ಆತ ಬದುಕಿನುದ್ದಕ್ಕೂ ವ್ಯವಸ್ಥೆಯ ವಿರುದ್ಧ ಚಟುವಟಿಕೆಯನ್ನು ನಡೆಸಿಯೇ ಇದ್ದ. ಈತನನ್ನು ಬಹಳವಾಗಿ ಕಾಡಿದ್ದು ಶೋಷಣೆ ಮತ್ತು ವರ್ಗವ್ಯವಸ್ಥೆಗಳು. ಇವುಗಳನ್ನು ತೊಡೆದು ಹಾಕುವುದು ಹೇಗೆಂದು ಆತ ಅಭ್ಯಾಸ ಮಾಡಿದ. ತನ್ನ 23ನೇ ವಯಸ್ಸಿನಲ್ಲಿ ಡಾಕ್ಟರೇಟ್ ಪಡೆದ ಈತ ಚರಿತ್ರೆ, ತತ್ವಶಾಸ್ತ್ರಗಳನ್ನು ಆಳವಾಗಿ ಅಧ್ಯಯನ ಮಾಡಿದ. ರಾಬರ್ಟ್ ಓವನ್,

ಇಮ್ಯಾನುಯಲ್ ಕ್ಯಾಂಟ್, ಹೆಗೆಲ್ ಇವರ ವಿಚಾರಧಾರೆಗಳಿಂದ ಮಾರ್ಕ್ಸ್ ತುಂಬ ಪ್ರಭಾವಿತನಾದ. ಮಧ್ಯಮವರ್ಗದಿಂದ ಬಂದ ಈತನೊಂದಿಗೆ ಗಿರಣಿಯ ಮಾಲೀಕನ ಮಗ ಫ್ರೆಡ್ರರಿಕ್ ಏಂಜಲ್ಸ್ ಕೂಡ ಸೇರಿಕೊಂಡ. ಇಬ್ಬರ ವಿಚಾರ ಧಾರೆಗಳು ಪರಸ್ಪರ ಹೊಂದಾಣಿಕೆ ಉಳ್ಳವುಗಳಾಗಿದ್ದವು. ಸ್ಥಾಪಿತವಾದ ವ್ಯವಸ್ಥೆ ಶೋಷಣೆ, ವರ್ಗಸಮರವನ್ನು ಬೆಂಬಲಿಸುತ್ತದೆ. ಇವುಗಳು ಅವ್ಯವಸ್ಥೆ ನಾಶವಾದಾಗ ಮಾತ್ರ ಕಾರ್ಮಿಕರಿಗೆ ನ್ಯಾಯ ಲಭ್ಯ ಎಂಬುದನ್ನು ಇವರು ಅಧ್ಯಯನದಿಂದ ಕಂಡುಕೊಂಡರು. ಸಮಾಜದಲ್ಲಿನ ಎಲ್ಲ ಏರಿಳಿತಗಳು ವ್ಯವಸ್ಥೆಯಿಂದ ಹುಟ್ಟುತ್ತವೆ ಎಂಬುದನ್ನು ಚರಿತ್ರೆಯ ಅಧ್ಯಯನದಿಂದ ಕಂಡುಕೊಂಡರು. ಚರಿತ್ರೆಯ ಅಧ್ಯಯನ ಮಾಡಿ ಅದರ ಮೇಲೆ ಹೊಸ ಬೆಳಕು ಚೆಲ್ಲಿದರು. ಚರಿತ್ರೆಯ ಉದ್ದಕ್ಕೂ ವರ್ಗ ಹೋರಾಟ ತುಂಬಿ ಹೋಗಿದೆ. ಕೂಲಿಗಳನ್ನು ಮಾಲೀಕರು ಉದ್ದಕ್ಕೂ ಶೋಷಿಸುತ್ತ ಬಂದಿದ್ದಾರೆ. ಈ ಪರಿವಲಯದಲ್ಲೆಲ್ಲ ಭೂಮಿ, ಹಣ, ಕೈಗಾರಿಕೆಗಳು ಶೋಷಣೆಯ ಮಾಧ್ಯಮವಾಗಿವೆ. ಇವುಗಳಿಂದ ಶ್ರೀಮಂತರು ಮತ್ತಷ್ಟು ಬಲಾಢ್ಯರಾಗಿಯೂ ಕಾರ್ಮಿಕರು ದರಿದ್ರರಾಗಿಯೂ ಇವರ ಸಂಖ್ಯೆ ಹೆಚ್ಚುತ್ತಾ ನಿರುದ್ಯೋಗಿಗಳು ಹೆಚ್ಚು ಹೆಚ್ಚು ಉಂಟಾಗುವರೆಂಬುದನ್ನು ತಿಳಿಯಪಡಿಸಿದ.

ಮಾರ್ಕ್ಸ್ ಸ್ಥಾಪಿತವಾದ ವ್ಯವಸ್ಥೆಯನ್ನು ಚರಿತ್ರೆಯ ಹಿನ್ನಲೆಯಲ್ಲಿ ಅಧ್ಯಯನ ಮಾಡಿದ. ವ್ಯವಸ್ಥೆ ಕಾರಣವಾಗಿ ಧರ್ಮ, ದೇವರು ತತ್ವಶಾಸ್ತ್ರಗಳು ಜನಮನದಲ್ಲಿ ಉಂಟಾಗುತ್ತವೆಂದೂ ಬದಲಿ ವ್ಯವಸ್ಥೆ ರೂಪಿತ ಆದಾಗ ಧರ್ಮ, ದೇವರುಗಳ ಬಗೆಗಿನ ಕಲ್ಪನೆಗಳು ತಾವೇತಾವಾಗಿ ಇಲ್ಲವಾಗುತ್ತವೆಯೆಂದೂ ತಿಳಿಸಿದ. ಈತ ಪತ್ರಿಕೆಗಳಿಗೆ ಲೇಖನಗಳನ್ನು ಬರೆಯುತ್ತ ತನ್ನ ವಿಚಾರಗಳನ್ನು ಸಂವಹನೆ ಮಾಡುತ್ತ ಬಂದ. ತನ್ನ ಬದುಕಿನುದ್ದಕ್ಕೂ ಈತ 14 ಸಲ ವಿವಿಧ ದೇಶಗಳವರಿಂದ ಹೊರದೂಡಿಸಿಕೊಂಡಿದ್ದಾನೆ. ದೇಶದ ವ್ಯವಸ್ಥೆಯ ವಿರುದ್ಧ ಚಟುವಟಿಕೆಗೆ ತೊಡಗಿದ್ದನೆಂದು ಈತನನ್ನು ಗಡಿಪಾರು ಮಾಡುತ್ತಾ ಬಂದರು. ಯೂರೋಪಿನಾದ್ಯಂತ ಈತ ಸಂಚರಿಸಿದ. ಕೈಗಾರಿಕೆಗಳು ಅದೇ ಆಗ ಸ್ಥಾಪನೆಯಾಗಿದ್ದವು. ಈ ಮುಂಚೆ ಭೂಮಿಯಿಂದಾಗಿ ಶೋಷಣೆ ವರ್ಗ ವ್ಯವಸ್ಥೆ ಬೆಳೆದಿದ್ದರೆ. ನಂತರ ಅದರ ಜೊತೆಗೆ ಕೈಗಾರಿಕೋದ್ಯಮಗಳೂ ಸೇರಿಕೊಂಡವು. ಈ ಉದ್ಯಮಗಳಿಂದ ಹಳ್ಳಿಯಿಂದ ನಗರಕ್ಕೆ

ಜನ ವಲಸೆ ಬಂದು ನಗರದಲ್ಲಿ ನೆಲೆಸಿದರು. ಕೆಲಸಕ್ಕಾಗಿ ವಲಸೆ ಬರುವ ಸಂಖ್ಯೆ ಹೆಚ್ಚಿ ಹಳ್ಳಿಗಳು ಹಿಂದುಳಿದು ನಗರಗಳು ಬೆಳೆದವು. ಕ್ರಮೇಣ ಕೈಗಾರಿಕೆಯಿಂದಾಗಿ ಶ್ರಮಿಕವರ್ಗ ಒಂದೆಡೆ ಸಂಘಟಿತವಾದರು. ಕೈಗಾರಿಕೋದ್ಯಮಿಗಳು, ವ್ಯಾಪಾರಿಗಳು ಹೆಚ್ಚು ಕೂಲಿಕಾರರನ್ನು ಅವಲಂಬಿಸಿ ಶ್ರೀಮಂತರಾಗುತ್ತ ಬಂದರು. ಕೂಲಿಕಾರರಿಲ್ಲದೆ ಕೈಗಾರಿಕೆಗಳು ನಡೆಯುವಂತಿಲ್ಲ. ಅಷ್ಟರ ಮಟ್ಟಿಗೆ ಬಂಡವಾಳಷಾಹಿಗಳು ಶ್ರಮಿಕ ವರ್ಗವನ್ನು ಅವಲಂಬಿಸಿದರು. ಜೀವನ ನಿರ್ವಹಣೆಗೆ ಶ್ರಮಿಕವರ್ಗ ಬಂಡವಾಳಗಾರರನ್ನು ಅವಲಂಬಿಸಿದರೆ ಅವರು ಉತ್ಪಾದನೆಯನ್ನೆಲ್ಲ ತಾವು ಪಡೆದು ಕಡಿಮೆ ಪ್ರಮಾಣದಲ್ಲಿ ಸಂಬಳ ಕೊಟ್ಟು ಶೋಷಿಸಿದರು. ದುಡಿಮೆಯಿಂದ ಬರುವ ಹಣದಲ್ಲಿ ಅವರ ಹೊಟ್ಟೆ ತುಂಬದಾಯಿತು. ಇದರಿಂದಾಂಗಿ ನಿಗದಿಗಿಂತ ಹೆಚ್ಚು ಕಾಲ ದುಡಿಯುವುದು ಅನಿವಾರ್ಯ ಆಯಿತು. ಒಟ್ಟಾರೆ ಶ್ರಮಿಕ ವರ್ಗಕ್ಕೆ ಯೋಚಿಸಲು ಸಮಯ ಸಿಗಲಿಲ್ಲ. ಅಷ್ಟರ ಮಟ್ಟಿಗೆ ಅವರು ದುಡಿಯುತ್ತ ಹೊಟ್ಟೆ ತುಂಬಿಸಿಕೊಳ್ಳುವುದರಲ್ಲಿ ಮಾತ್ರ ಮಗ್ನರಾದರು. ಹಣ ಹಾಕಿ, ಯೋಚಿಸಲು ಸಮಯವಿದ್ದ ಬಂಡವಾಳಗಾರರು ಇವರನ್ನು ಯಾವ ಯಾವ ಪ್ರಮಾಣದಲ್ಲಿ ಹೇಗೆ ದುಡಿಸಿಕೊಳ್ಳಬಹುದು ಅದರ ಉತ್ಪಾದನೆ ಹೇಗೆ ಅನುಭೋಗಿಸಬಹುದು ಎಂದುದರಲ್ಲಿ ಬುದ್ಧಿ ಖರ್ಚು ಮಾಡಿದರು.

ವ್ಯವಸ್ಥೆ ರೂಪಿತವಾದಾಗ ಅದು ಒಂದು ದಿಕ್ಕಿನಲ್ಲಿ ಸ್ಥಾಪಿತವಾಗುತ್ತಿದ್ದಂತೆ ಇನ್ನೊಂದು ದಿಕ್ಕಿನಲ್ಲಿ ತನ್ನ ಮಿತಿ, ದೌರ್ಬಲ್ಯಗಳನ್ನು ತೋರಿಸಿಕೊಳ್ಳುತ್ತದೆ. ಹಳೆಯ ವ್ಯವಸ್ಥೆಯನ್ನು ದೂಡಿ ಹೊಸ ವ್ಯವಸ್ಥೆಯೊಂದು ಪೂರ್ಣವಾಗಿ ಸ್ಥಾಪಿತ ಆದಾಗ ಈ ವ್ಯವಸ್ಥೆಯ ಸಮಗ್ರ ಪರಿಚಯ ಜನರಿಗಾಗುತ್ತದೆ. ಅದರ ಅನಾಹುತ, ಪ್ರಯೋಜನಗಳು ಕ್ರಮೇಣ ಬೆಳಕಿಗೆ ಬರುತ್ತವೆ. ಮಧ್ಯಕಾಲದ ಯೂರೋಪ್ ದೇಶದಲ್ಲಿ ಆದದ್ದು ಹೀಗೆಯೇ. ಕೈಗಾರಿಕೆಗಳು ಸ್ಥಾಪನೆಗೊಂಡು ಬಂಡವಾಳ ಷಾಹಿಗಳು 40-50 ವರ್ಷಗಳ ಕಾಲ ತಮ್ಮ ವಿಕ್ರಮವನ್ನು ಸಾಧಿಸಿದರು. ಅದು ನಂತರ ಮುಂದುವರಿಯದಾಯಿತು. ಚರಿತ್ರೆ ಕ್ರಾಂತಿಯೊಂದನ್ನು ತಾನೇ ರೂಪಿಸುತ್ತದೆ. ಇದರಲ್ಲಿ ಜನರ ಪಾಲಿಗಿಂತ ವ್ಯವಸ್ಥೆಯ ರಚನೆಯ ಪಾಲೇ ಹೆಚ್ಚು ಎಂದು ಮಾರ್ಕ್ಸ್ ಹೇಳಿದ್ದಾನೆ.

ಬಂಡವಾಳ ಸಮಾಜದ ಅಧ್ಯಯನ ಮಾಡಿದ ಮಾರ್ಕ್ಸ್ ಕಾರ್ಮಿಕರನ್ನು ಸಂಘಟಿಸುವುದರತ್ತ ಮನಸ್ಸು ಮಾಡಿದ. ಪ್ರಪಂಚದ ಕಾರ್ಮಿಕರು ಒಂದಾಗಿರಿ. ನಿಮ್ಮ ಸಂಕೋಲೆಗಳ ಹೊರತು ನೀವು ಕಳೆದುಕೊಳ್ಳಬೇಕಾದುದು ಏನೂ ಇಲ್ಲ. ಪ್ರಪಂಚವೇ ನಿಮ್ಮದಾಗುತ್ತದೆ ಎಂದು ಆತ ಕಾರ್ಮಿಕರಿಗೆ ಪತ್ರಿಕೆಗಳಲ್ಲಿ ಕರೆ ನೀಡಿದ. ಆತನ 'ಕ್ಯಾಪಿಟಲ್' ಎಂಬ ಕೃತಿ ಬಂಡವಾಳ ವ್ಯವಸ್ಥೆಯನ್ನು ಸಮಗ್ರವಾಗಿ ಅಧ್ಯಯನ ಮಾಡಿ ಅದರ ವ್ಯಾಪ್ತಿ, ಮಿತಿಗಳನ್ನು ಪರಿಚಯಿಸುತ್ತದೆ. ಅಲ್ಲದೆ ಕಮ್ಯುನಿಸಮ್‌ನ್ನು ಹೇಗೆ ವ್ಯವಸ್ಥೆಗೊಳಿಸಬೇಕು ಎಂಬುದನ್ನು ವಿವರವಾಗಿ ತಿಳಿಸಿದ್ದಾನೆ. 1864 ರಲ್ಲಿ ಅಂತರಾಷ್ಟ್ರೀಯ ಮಟ್ಟದಲ್ಲಿ ಮೊದಲಿಗೆ ಕಾರ್ಮಿಕರ ಸಂಘಟನೆ ಆಯಿತು. 1867 ರಲ್ಲಿ ಬಂದ ಕ್ಯಾಪಿಟಲ್ ಕೃತಿ ವ್ಯವಸ್ಥೆಯಲ್ಲಿ ಮುಳುಗುತ್ತಿದ್ದ ಕಾರ್ಮಿಕರಿಗೆ ತೇಲುವ ತೆಪ್ಪವಾಗಿ ಆಶ್ರಯ ನೀಡಿತು. ಈ ಕೃತಿಯಲ್ಲಿ ಬಲಪ್ರಯೋಗವಿಲ್ಲದೆ ಅಧಿಕಾರ, ನ್ಯಾಯಗಳು ತಮಗೆ ದೊರೆಯುವುದಿಲ್ಲ. ಶ್ರೀಮಂತರ ವಿರುದ್ಧ ದೊಡ್ಡ ಸಮರವನ್ನೇ ಸಾರಿ ನಾವು ಜಯ ಪಡೆಯಬೇಕು. ಇದು ರಕ್ತದ ಕಾಲುವೆ ಹರಿಯುವುದರಿಂದ ಮಾತ್ರ ಸಾಧ್ಯ ಎಂದು ಆತ ವಿವರಿಸಿದ್ದಾನೆ.

ಮಾರ್ಕ್ಸ್ ಸಮಾಜವನ್ನು ಸಂಘಟಿಸುವಲ್ಲಿ ಯುದ್ಧಕ್ಕೆ ತೊಡಗಿಸುವಲ್ಲಿ ಪ್ರಾಥಮಿಕ ಹಂತದಲ್ಲಿ ಕೆಲಸ ಮಾಡಿದ. ಕಾರ್ಮಿಕರು ಆಗಿನ್ನು ಯೋಚನೆ, ಅನುಮಾನಗಳಿಗೆ ತೊಡಗಿದ್ದರು. ಮಾರ್ಕ್ಸ್ ಬಿತ್ತಿದ ಬೀಜದ ಬೆಳೆಯನ್ನು ಲೆನಿನ್ ತೆಗೆದುಕೊಂಡ. ಮಾರ್ಕ್ಸ್ ಸತ್ತ ನಂತರದಲ್ಲಿ 1899 ರಲ್ಲಿ ಅಂತರಾಷ್ಟ್ರೀಯ ಮಟ್ಟದಲ್ಲಿ ಕಾರ್ಮಿಕರ ಎರಡನೇ ಸಮ್ಮೇಳನ ನಡೆಯಿತು. ಆ ಹೊತ್ತಿಗೆ ಬಂಡವಾಳಷಾಹಿ ವ್ಯವಸ್ಥೆ ಪೂರ್ಣವಾಗಿ ತನ್ನೆಲ್ಲ ಚಳುವಳಿಗಳನ್ನು ಜನರಿಗೆ ಪರಿಚಯಿಸಿತ್ತು.

ರಷಿಯದ ಜನತೆ ಬಂಡವಾಳಗಾರರಿಂದ ಮತ್ತು ಪಾಳೆಯಗಾರಿಕೆ ನಡೆಸಿದ ರಾಜರುಗಳಿಂದ ಶೋಷಿತರಾಗುತ್ತಾ ಹೋದರು. ದುಡಿದಷ್ಟು ಬಡತನ ಹೆಚ್ಚಿತೆ ವಿನಾ ದುಡಿಮೆಗಾರರ ಆರ್ಥಿಕ ಪರಿಸ್ಥಿತಿ ಸುಧಾರಣೆಯಾಗಲಿಲ್ಲ. ಇವರ ಸಂಖ್ಯೆ ಹೆಚ್ಚಿತು. ನಿರುದ್ಯೋಗಿಗಳು ಅಪಾರವಾಗಿ ಹೆಚ್ಚಿದರು. ಉಣ್ಣಲು ಗತಿಯಿಲ್ಲದಂತಾಯಿತು. ಜಾರ್ ದೊರೆ ನಿಕೋಲಸನ್‌ನ ಬಳಿಗೆ ಹೋಗಿ ಒಗ್ಗಟ್ಟಾದ ಜನ ಆಹಾರ ಬೇಡಿದರು. ಉತ್ತರ ದೊರೆತದ್ದು ಬಂದೂಕಿನ ನಳಿಕೆಯಿಂದ

ಬಂದ ಗುಂಡುಗಳು. ಸಾವಿರ ಸಾವಿರ ಸಂಖ್ಯೆಯಲ್ಲಿ ದುಡಿಮೆಗಾರರ ಕಗ್ಗೊಲೆಯಾಯಿತು. 7000 ಕ್ಕೂ ಹೆಚ್ಚು ಜನ ಸೆರೆಮನೆ ಸೇರಿದರು. ಅನೇಕರಿಗೆ ಮರಣ ದಂಡನೆ ವಿಧಿಸಲಾಯಿತು. ಮುಗ್ಧ ಜನಗಳ ಮೇಲೆ ದೌರ್ಜನ್ಯದ ಅತಿರೇಕ ಮಿತಿಮೀರಿತು. ಈ ದಿಸೆಯಲ್ಲಿ ಕಾರ್ಲ್‌ಮಾರ್ಕ್ಸ್‌ನ ವಿಚಾರ ಧಾರೆಗಳು ಬಾಯಾರಿ ಸಾಯುವವನಿಗೆ ನೀರು ದೊರೆತಂತಾಯಿತು. ವರ್ಗ ಸಮರ ಅನಿವಾರ್ಯ ಆಯಿತು. ಕಾರ್ಮಿಕರ ವಿಜಯ ಅಗತ್ಯವೆಂದು ಕಾರ್ಮಿಕರು ಮನಗಂಡರು. ಈ ದಿಸೆಯಲ್ಲಿ ಲೆನಿನ್ ದೇಶದಾದ್ಯಂತ ಸಂಘಟನೆಗೆ ತೊಡಗಿದ.

ಮಾರ್ಕ್ಸ್‌ನ ಥಿಯರಿ ಬಳಸಿಕೊಂಡು ಈತ ವಿಜಯ ಸಾಧಿಸಿದ. ಪ್ರಥಮ ಮಹಾಯುದ್ಧ ಕೂಡ ಜಾರ್‌ನಿಕೋಲಸ್‌ನಿಗೆ ಪ್ರತಿಕೂಲವಾಯಿತು. 1917 ರಲ್ಲಿ ಜನರ ತಾಳ್ಮೆಯ ಕಟ್ಟೆ ಒಡೆಯಿತು. ಜಾರ್‌ಷಾಹಿ ಪ್ರಭುತ್ವದ ವಿರುದ್ಧ ಕಾರ್ಮಿಕರು ಯುದ್ಧದಲ್ಲಿ ತೊಡಗಿದರು. ಕಾರ್ಮಿಕರ ಒಕ್ಕೂಟ ರಚನೆಯಾದವು. ಇವರೊಂದಿಗೆ ಸೈನಿಕರು ಸೇರಿಕೊಂಡರು. ಅಕ್ಟೋಬರ್ 25 ರಂದು ಯುದ್ಧ ಮೊದಲಾಯಿತು. ಅಧಿಕಾರ ಸ್ಥಾನಗಳು ಕಾರ್ಮಿಕರ ವಶವಾದವು. 2ನೇ ಜಾರ್ ನಿಕೋಲಸ್‌ನ ಬಲವಂತ ಪದಚ್ಯುತಿಯಾಯಿತು. ಶ್ರೀಮಂತ ವ್ಯಕ್ತಿಗಳಿದ್ದ ಸ್ಥಾನಗಳಲ್ಲೆಲ್ಲಾ ಕಾರ್ಮಿಕರ ಕಮಿಸ್ಸಾರುಗಳು ರಚನೆಯಾದವು. ಲೆನಿನ್ ಬುದ್ಧಿವಂತ ಬೂರ್ಶ್ವಾಗಳನ್ನು ಹೊರಗಟ್ಟದೆ ಅವರನ್ನು ದುಡಿಸಿಕೊಂಡು ನಾವು ವಿಜಯ ಸಾಧಿಸಬೇಕೆಂದು ಹೇಳಿದ. ಅದರಂತೆಯೇ ಮಾಡಿದ. ಬಂಡವಾಳ ಷಾಹಿಗಳು ಕಾರ್ಮಿಕರನ್ನು ದುಡಿಸಿಕೊಂಡು ತಾವು ಶ್ರೀಮಂತರಾದಂತೆ ನಾವು ಬುದ್ಧಿವಂತ ಬೂರ್ಶ್ವಾಗಳನ್ನು ದುಡಿಸಿಕೊಂಡು ದುಡಿಯುವುದಲ್ಲದೆ ಅನ್ಯ ವಿಧಿಯಲ್ಲಿ ಎಂಬುವಂತೆ ವ್ಯವಸ್ಥೆಗೊಳಿಸಿದ. ಇವರಿಗೂ ಅಗತ್ಯ ವಸ್ತುಗಳ ಪೂರೈಕೆ ನೀಡಿದ. ಬಂಡವಾಳ ಷಾಹಿ ವ್ಯವಸ್ಥೆಯಲ್ಲಿ ಬೂರ್ಶ್ವಾ ಸಿಗುತ್ತಿದ್ದ ಮಾನ್ಯತೆ, ಹಣ ಇತ್ಯಾದಿಗಳು ಈಗಲೂ ಇನ್ನೂ ಹೆಚ್ಚು ಸುಲಭವಾಗಿ ಸಿಗುವಂತೆ ರಚನೆಗೊಳಿಸಿದ. ಬೂರ್ಶ್ವಾ ವರ್ಗ ತನ್ನ ಸುಸ್ಥಿತಿಯನ್ನು ನೋಡಿಕೊಳ್ಳುವಂಥದು. ತನಗೆ ಅಗತ್ಯ ಪೂರೈಕೆ ದೊರೆತದ್ದರಿಂದ ಅದು ಕಮ್ಯುನಿಸಂ ಸಮಾಜದೊಂದಿಗೆ ಬೆರೆಯಿತು.

ಮಾರ್ಕ್ಸ್ ಸಾಧಿಸದುದನ್ನು ಲೆನಿನ್ ಸಾಧಿಸಿದ. ರಷಿಯದಾದ್ಯಂತ

ಕಮ್ಯುನಿಸಂ ಸರ್ಕಾರ ಸ್ಥಾಪಿತ ಆಯಿತು. ಖಾಸಗಿ ಸ್ವತ್ತು ಸರ್ಕಾರದ, ಸಮಾಜದ ಸ್ವತ್ತಾಯಿತು. ಸಮಾಜ, ಸರ್ಕಾರಗಳು ಕಾರ್ಮಿಕರ ವಶವಾದವು. ಕಮ್ಯುನಿಸಂಗೆ ವಿರುದ್ಧ ತೊಡಗುವವರಿಗೆ ಮರಣ ದಂಡನೆ ವಿಧಿಸಲಾಯಿತು. ಎಂಟು ಗಂಟೆ ಕಾಲ ಪ್ರತಿಯೊಬ್ಬನೂ ದುಡಿಯಬೇಕು ಮತ್ತು ತನಗೆ ಎಷ್ಟು ಬೇಕೋ ಅಷ್ಟನ್ನು ಮಾತ್ರ ಪಡೆಯಲೇಬೇಕು. ಬಂಡವಾಳಷಾಹಿ ಆಡಳಿತ ಕೊನೆಗೊಂಡು ಕಾರ್ಮಿಕರ ಸರ್ಕಾರ ರಚನೆಯಾಯಿತು. ಬಂಡವಾಳ ಹೂಡುವ ಹಕ್ಕು ಉತ್ಪಾದನೆ ಪಡೆಯುವ ಸ್ವಾಮ್ಯ ಸಮಾಜದ್ದಾಯಿತು. ಈ ಸಮಾಜ ಕಾರ್ಮಿಕರಿಂದ ನಿಯಂತ್ರಿತವಾದುದಾಯಿತು. ಇದರಿಂದ ಸಮಾಜದಲ್ಲಿದ್ದ ಶೋಷಣೆ, ವರ್ಗ ಸಮರ ನೂರಕ್ಕೆ ತೊಂಬತ್ತು ಪಾಲು ಇಲ್ಲವಾಯಿತು. ಚರಿತ್ರೆಯ ಅಧ್ಯಯನ ಕಾರ್ಲ್‌ಮಾರ್ಕ್ಸ್‌ನನ್ನು ಕಮ್ಯುನಿಸಂ ಜನಕನನ್ನಾಗಿ ಮಾಡಿದ್ದಾರೆ. ರಷಿಯದ 20ನೇ ಶತಮಾನದ ಆರಂಭದ ಸಮಾಜ, ಲೆನಿನ್‌ನನ್ನು ಮಾರ್ಕ್ಸ್ ವಾದದ ಮಹಾಪ್ರಯೋಗಶೀಲನನ್ನಾಗಿ, ನಾಯಕನನ್ನಾಗಿ ರೂಢಿಸಿತು. ಇವತ್ತು ಪ್ರಪಂಚದಾದ್ಯಂತ ಮಾರ್ಕ್ಸ್‌ನ ಪ್ರಣಾಲಿಗಳ ಪ್ರಭಾವ ಕಾಣಬಹುದಾಗಿದೆ. ನಮ್ಮ ದೇಶದಲ್ಲಿಯೂ ಬೇರು ಬಿಡುತ್ತಿರುವ ಸಮಾಜವಾದೀ ಧೋರಣೆ ಆತನ ಪ್ರಭಾವದಿಂದಾದುದೇ ಆಗಿದೆ. ಇಂದು ಸೋವಿಯತ್ ರಷಿಯ, ಚೀನ, ರುಮೇನಿಯ, ಬಲ್ಗೇರಿಯ, ಪೋಲೆಂಡ್, ಜೆಕೊಸ್ಲೆವೇಕಿಯ ರಾಷ್ಟ್ರಗಳು ಕಮ್ಯುನಿಸಂ ಸರ್ಕಾರವನ್ನು ಹೊಂದಿದವುಗಳಾಗಿವೆ.

ರಷಿಯದ 1917 ರ ಯುದ್ಧದಿಂದಾಗಿ ಆರ್ಥಿಕ, ಸಾಮಾಜಿಕ, ರಾಜಕೀಯ ಪರಿಸ್ಥಿತಿಗಳೆಲ್ಲ ಸಂಪೂರ್ಣವಾಗಿ ಬದಲಾದವು. ಕಮ್ಯುನಿಸಂ ರಾಜಕೀಯವಾಗಿ ಬೇರು ಬಿಡುವುದರ ಮೂಲಕ ತನ್ನದೇ ಪ್ರಭಾವದಿಂದ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ವಲಯಗಳಲ್ಲಿ ಹೊಸತಾದ ಬೆಳೆಯನ್ನೇ ನೀಡಿತು. ಜನರ ಜೀವನ ವಿಧಾನ, ಮೌಲ್ಯಗಳೆಲ್ಲ ಬೇರೆ ರೂಪ ಪಡೆದವು. ಅವರ ಆಲೋಚನೆಗಳಿಗೆ ಒಂದು ಹೊಸ ತಿರುವು ಇದರಿಂದ ದೊರೆಯಿತು.

**ಬಸವಣ್ಣ :**

ಅಯ್ಯಾ ಭಕ್ತಿಗೆ ಬೀಡಾದುದು ಕಲ್ಯಾಣ ಮೂವತ್ತಾರು ವರುಷ
ಅಯ್ಯಾ ಅನುಭವಕ್ಕೆ ಶಿವಸದನವಾದುದು ಇಪ್ಪತ್ತೇಳು ವರುಷ

ಈ ಭಕ್ತಿ, ಅನುಭವಗಳೆಲ್ಲ ಮೂರು ಮಾಸದೊಳಗೆ ಇಲ್ಲದಂತಾದುವು ಎಂದು ಬಸವಣ್ಣನವರು ತಮ್ಮ ವಚನದಲ್ಲಿ (1166) ಹೇಳಿಕೊಂಡಿದ್ದಾರೆ.

ತನ್ನ ಬದುಕಿನ ಅನೇಕ ಸಂಗತಿಗಳನ್ನು ಬಸವಣ್ಣನವರು ವಚನಗಳಲ್ಲಿ ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. ಒಬ್ಬ ಇತಿಹಾಸಕಾರನಿಗೆ ಬೇಕಾದ ಅನೇಕ ಅಂಶಗಳನ್ನು ಅವರ ವಚನಗಳು ತಿಳಿಸುತ್ತವೆ. ಹೀಗಿದ್ದರೂ ಇದುವರೆಗೆ ಬಸವಣ್ಣನವರ ಜೀವಮಾನ ಅವಧಿ 36 ವರ್ಷಗಳೇ ಅಥವಾ 64 ವರ್ಷಗಳೋ ಎಂಬ ವಾದಗಳು ಚಲಾವಣೆಯಲ್ಲಿವೆ. ಅರ್ಥಾತ್ ನಿಷ್ಕರ್ಷೆಗೆ ಇನ್ನು ಹೆಚ್ಚಿನ ಸಾಮುಗ್ರಿಯ ಅಭಾವ. ಮೂಲತಃ ಹೀಗಿದ್ದರೂ ಜನತೆ ಇವರ ಜಯಂತಿಯ ದಿನಾಂಕವನ್ನು ನಿಷ್ಕರ್ಷಿಸಿದಂತೆ ಒಪ್ಪಿಕೊಂಡು ಆಚರಿಸುತ್ತಲಿದೆ.

ಬಸವಣ್ಣನವರ ಬಗ್ಗೆ ಸಾಹಿತ್ಯ ಸೃಷ್ಟಿ, ಅಧ್ಯಯನ, ಸಂಶೋಧನೆಗಳು ವಿಪುಲವಾಗಿ ನಡೆದಿವೆ. ಬಹುಶಃ ಕನ್ನಡ ಸಾಹಿತ್ಯದಲ್ಲಿ ಬಸವಣ್ಣನವರ ಮೇಲೆ ಬಂದಷ್ಟು ಗ್ರಂಥಗಳು ಇತರರ ಮೇಲೆ ಬಂದಿಲ್ಲವೆಂದು ತೋರುತ್ತದೆ. ಬಸವಣ್ಣನವರನ್ನು ಇದುವರೆಗಿನ ನಮ್ಮ ಪರಂಪರೆ ಮತ್ತು ಈಗಿನ ಜನತೆ ಅವತಾರಿಯಾಗಿ, ಮಹಾನುಭಾವಿಯಾಗಿ, ಆಂದೋಲನಕಾರನಾಗಿ ವಚನಕಾರನಾಗಿ, ಮಹಾಸುಧಾರಕನಾಗಿ ಗುರುತಿಸುತ್ತಾ ಬಂದಿದೆ. ಸಮಕಾಲೀನ ಧೋರಣೆಯ ನೆಲೆಯಲ್ಲಿ ಮತ್ತೆ ಮತ್ತೆ ಪರಂಪರೆಯ ವ್ಯಕ್ತಿಗಳನ್ನು ನೋಡುತ್ತಾ ಹೋಗುವುದು ಪ್ರಯೋಜನ ಕಾರಿ ಮತ್ತು ಸೂಕ್ತ.

ಬಸವಣ್ಣನವರು ಹನ್ನೆರಡನೆಯ ಶತಮಾನದ ಶ್ರೇಷ್ಠ ವಚನಕಾರರು. ಇಡೀ ವಚನ ಸಾಹಿತ್ಯದ ಅಂತಃಸ್ಫೂರ್ತಿಯಾಗಿ, ಸಮಾಜಸುಧಾರಕರಾಗಿ, ಅನುಭಾವಿಗಳಾಗಿ ಇಲ್ಲಿ ಸಲ್ಲುವ ಮಾನವತಾವಾದಿಯಾಗಿ ಬದುಕು ಸವೆಸಿ

ದವರು. ಇಹಕ್ಕೆ ಮಹತ್ವ ಕೊಟ್ಟು ವೇದಾಂತದ ವೈದಿಕ ಗೊಡ್ಡು ವಹಿವಾಟು ಗಳನ್ನು ವಿಮರ್ಶಿಸಿ, ಹೊಸ ಬದುಕಿಗೆ ಬಾಗಿಲು ತೆರೆದುಕೊಂಡ ವ್ಯಕ್ತಿ ಈತ. ವರ್ಣವ್ಯವಸ್ಥೆಯ ಕಂದರಗಳನ್ನು ನೆಲಸಮ ಮಾಡಲು ಧರ್ಮದ ಹಾದಿ ಯಲ್ಲಿ ಪ್ರಯೋಗ ನಡೆಸಿದ ಮಹಾನುಭಾವಿ ಈತ.

ತನ್ನ ಕಾಲದಲ್ಲಿಯೇ ಆಗಿಹೋದ 280ಕ್ಕೂ ಹೆಚ್ಚು ವಚನಕಾರರಿಗೆ ಮಾರ್ಗದರ್ಶಕರಾಗಿ, ಶರಣ ಸಮುದಾಯಕ್ಕೆ ನಾಯಕರಾಗಿ ಅವರೆಲ್ಲರಿಗೆ ದಾರಿದೀಪವಾದವರು. ಇವರ ಕಾಲದಲ್ಲಿಯೇ ವಚನಕಾರರು ಇವರನ್ನು ಹೊಗಳಿ ಹೊಗಳಿ ಹೊನ್ನ ಶೂಲಕ್ಕೇರಿಸುವಷ್ಟು ಪ್ರಭಾವ ಬೀರಿದ್ದ ವ್ಯಕಿ ಬಸವಣ್ಣ. ರಾಜ ವರ್ಣಾಶ್ರಮ ಪರಿಪಾಲನೆಯಲ್ಲಿದ್ದಾಗ ಅದನ್ನು ಉಲ್ಲಂಘಿಸಿ ಚಕ್ರವರ್ತಿಯನ್ನೇ ಎದುರು ಹಾಕಿಕೊಂಡ ವ್ಯಕ್ತಿ ಈತ. ಇದನ್ನು ವ್ಯಕ್ತಿಯಾಗಿ ಶ್ರೇಷ್ಠ ವಚನಕಾರರಾಗಿದ್ದಾರೆ. ವಚನ ಎಂದ ತಕ್ಷಣ ಬಸ ವಣ್ಣನ ನೆನಪಾಗುತ್ತದೆ. ಬಸವಣ್ಣನಲ್ಲಿ ಕರ್ತೃತ್ವ ಶಕ್ತಿ ಇತ್ತೆಂದೇ ಅಲ್ಲಮ ನಂತಹ ಮಹಾ ಜ್ಞಾನ ಯೋಗಿಯೂ, ವೈರಾಗ್ಯ ಮೂರ್ತಿ ಅಕ್ಕಮಹಾದೇವಿಯೂ ಬಸವಣ್ಣನನ್ನು ಅರಸಿಕಲ್ಯಾಣದೆಡೆಗೆ ಬಂದರು.

ಹನ್ನೆರಡನೆಯ ಶತಮಾನದ ನಂತರ ಬಸವಣ್ಣನನ್ನು ಕುರಿತು ಹರಿಹರ ಮೊದಲಿಗೆ ಕಾವ್ಯವೊಂದನ್ನು ಬರೆದ. ಈ ಹರಿಹರನ ಪರಂಪರೆಯನ್ನು ವಿರೋಧಿಸಿ ಇನ್ನೊಂದು ಕಾವ್ಯ ಪರಂಪರೆ ಪಾಲ್ಕುರಿಕೆ ಸೋಮನಾಥ, ಭೀಮ ಕವಿಯಿಂದ ಹುಟ್ಟಿಕೊಂಡಿತು. ಅನಂತರ ಅನೇಕ ಕವಿಗಳು ಬಸವಣ್ಣನವರನ್ನು ವಸ್ತುವಾಗಿಟ್ಟುಕೊಂಡು ಕೃತಿರಚಿಸಿದ್ದಾರೆ. ಈ ಬಗ್ಗೆ ಕೆಲವು ಶಾಸನಗಳೂ ಅಲ್ಲಲ್ಲಿ ಉಲ್ಲೇಖಿಸುತ್ತವೆ. ಬಸವಣ್ಣನ ವ್ಯಕ್ತಿತ್ವ, ಧೋರಣೆ, ಆ ಧಾರ್ಮಿಕ ವಿಧಿ ಆಚರಣೆಗಳು, ಜನಪದ ಪರಿವಲಯದಲ್ಲಿ ಅಗಾಧ ಸಾಹಿತ್ಯ ನಿರ್ಮಾಣಕ್ಕೆ ವಸ್ತುವಾಗಿದೆ. ಬಸವಣ್ಣ ಒಂದು ಪರಂಪರೆಯನ್ನು ನಿರ್ಮಿಸುವಷ್ಟರ ಮಟ್ಟಿಗೆ ತನ್ನ ವ್ಯಕ್ತಿತ್ವ ಬೆಳೆಸಿಕೊಂಡಿದ್ದ ಇಹಕ್ಕೆ ಸಂದ ವ್ಯಕ್ತಿ.

ಇಂಗಳೇಶ್ವರ ಬಾಗೆವಾಡಿಯಲ್ಲಿ ಮಾದರಸ ಮಾದಲಾಂಬಿಕೆಯರಿಗೆ ಎರಡನೆಯ ಮಗನಾಗಿ ಜನಿಸಿದ ಈತ ತನಗಿಂತ ಮುಂಚೆ ಒಬ್ಬ ಅಣ್ಣನನ್ನು ಪಡೆದಿದ್ದು ಸಂಗತಿ ಶಾಸನದಿಂದ ವ್ಯಕ್ತವಾಗುತ್ತದೆ. ಈ ಅರ್ಜುನವಾಡ ಶಿಲಾ ಶಾಸನವು ದೇವರಾಜ ಎಂಬುವವನು ಬಸವಣ್ಣನ ಹಿರಿಯಣ್ಣ ಎಂಬುದನ್ನು

ಹೇಳುತ್ತದೆ. ಹೀಗಾಗಿ ನಮ್ಮ ಕಾವ್ಯಗಳೆಲ್ಲ ಬಸವಣ್ಣ ನಂಬಿಯ ಅವತಾರ, ವೃಷಭನೋಂಪಿಯಿಂದ ಹುಟ್ಟಿದ ಎಂದು ಹೇಳುವ ಕಲ್ಪನೆಯೆಲ್ಲ ಬಿದ್ದು ಹೋಗುತ್ತದೆ. ಬಸವನಿಗಿಂತ ಮುಂಚೆ ಒಬ್ಬ ಮಗನು ಇರುವ ಕಾರಣ ಮತ್ತೆ ಮಾದರಸ ಮಾದಲಾಂಬಿಕೆಯರೂ ವೃಷಭ ನೋಂಪಿಯನ್ನು ಪುತ್ರ ಕಾರಣ ಮಾಡುವ ಅಗತ್ಯ ಒದಗುವುದೇ ಇಲ್ಲ. ಬಸವ ಎಂದು ತಂದೆ ತಾಯಿಗಳು ವಂಶಪಾರಂಪರ್ಯವಾಗಿ ಬಂದ ಹೆಸರನ್ನು ? ಇಟ್ಟಿದ್ದನ್ನೇ ನೆಪವಾಗಿಟ್ಟು ಕೊಂಡು ವೃಷಭನೋಂಪಿ ಕಥೆ, ನಂದಿಯ ಅವತಾರ ಇತ್ಯಾದಿ ಕಥೆ ಗಳನ್ನು ನಮ್ಮ ಕವಿಗಳು ಕಲ್ಪಿಸಿದ್ದು ಕಪೋಲ ಕಲ್ಪಿತ ಎಂಬುದು ಈ ಶಾಸನ ದಿಂದ ವ್ಯಕ್ತವಾಗುತ್ತದೆ. ನಮ್ಮ ಕಾವ್ಯಗಳೆಲ್ಲ ಬಸವಣ್ಣನ ಅಣ್ಣನ ಹೆಸರಷ್ಟೇ ಅಲ್ಲ ಹುಟ್ಟಿದ್ದುದನ್ನೇ ಮರೆಮಾಚಿದ್ದ ಹಾಗೆಯೇ ಅಕ್ಕನಾಗಲೆಯ ಗಂಡನನ್ನ ಧರ್ಮಕಾರಣವಾಗಿ ನಮ್ಮ ಕನ್ನಡಕಾವ್ಯಗಳು ಮರೆಮಾಡಿರಬಹುದೆ ? ಅಕ್ಕ ನಾಗಲೆಯು ಬಸವಣ್ಣನಂತೆ ವೀರಶೈವ ಧರ್ಮ ಸ್ವೀಕರಿಸಲು ಬಂದ ಕಾರಣ ಅವಳ ಗಂಡ ? ವೈದಿಕ ಧರ್ಮದ ಅನುಯಾಯಿಯಾಗಿದ್ದ ಕಾರಣ ಕವಿಗಳು ಮರೆ ಮಾಡಿರಬಹುದ ? ಅಥವಾ ಆಕೆಯ ಗಂಡ ಗತಿಸಿದ್ದರಿಂದ ಆಶ್ರಯಕ್ಕೆ ಬಸವನನ್ನು ಅಕ್ಕನಾಗಲೆ ಆಶ್ರಯಿಸಿರಬಹುದು. ಆಕೆಯ ಗಂಡ ವೈದಿಕನು ಅಮುಖ್ಯನೂ ಆಗಿದ್ದರಿಂದ ನಮ್ಮ ಕವಿಗಳು ಹೇಳದೇ ಬಿಟ್ಟಿರಬಹುದು. ಇದನ್ನೇ ಮುಂದು ಮಾಡಿಕೊಂಡು ನಂತರದ ಕಾವ್ಯಗಳು ಚೆನ್ನಬಸವಣ್ಣ ಗಂಡ ನಿಲ್ಲದೆ ಹುಟ್ಟಿದ. ಅಂದರೆ ಶಿವನಪ್ರಸಾದದಿಂದ ಹುಟ್ಟಿದ ಇತ್ಯಾದಿ ಕಥೆ ಕಟ್ಟಿರ ಬಹುದು. ಅದೇ ರೀತಿ ಬಸವ ಬಿಜ್ಜಳರ ಸಂಬಂಧ, ಬಸವನ ಕೊನೆಯ ದಿನ ಗಳನ್ನು ಇನ್ನೂ ಪರಿಶೀಲಿಸಬೇಕಾಗಿದೆ.

ಸಾಹಿತ್ಯ ಸೃಷ್ಟಿಗೆ ನಮ್ಮಲ್ಲಿ ರಾಜಾಶ್ರಯ ಪ್ರಮುಖವಾಗಿತ್ತು. ಹೀಗಿ ದ್ದರೂ ಸಾಹಿತ್ಯ ಸೃಷ್ಟಿಕರ್ತರು ಒಂದೇಕಾಲದಲ್ಲಿ ಹೆಚ್ಚು ಸಂಖ್ಯೆಗಳು ಮತ್ತು ಸತ್ವಪೂರ್ಣ ಸಾಹಿತ್ಯ ಹೊರ ಹೊಮ್ಮಲಿಲ್ಲ. ರಾಜಾಶ್ರಯ ಮಾಡುತ್ತಿದ್ದ ಪೂರ್ಣ ಸಹಾಯವನ್ನು ಬಸವಣ್ಣನ ಮಹಾಮನೆ ಮಾಡಿತು ; ನೂರೆಂಬತ್ತೆ ರಡು+ಒಂಬತ್ತು 191ಕ್ಕೂ ಹೆಚ್ಚು ವಚನಕಾರರನ್ನು ಭಕ್ತಿಯ ಬೀಡಾದ ಕಲ್ಯಾಣ ಕೊಟ್ಟಿತ್ತು ; ಶಿವಸದನಕ್ಕೆ ಪ್ರೇರಣೆಯಾಯಿತು. ಇಲ್ಲಿ ರಾಜಾ

ಶ್ರಯದಂತೆ ಬಿರುದು, ಬಾವಲಿಗಳು, ಧನ–ಕನಕ ಸನ್ಮಾನಗಳು ದೊರೆಯಲಿಲ್ಲ. ಅಲ್ಲದೆ ಇವು ಮುಖ್ಯವೂ ಅಲ್ಲ. ಅಂದಂದಿನುಚಿತಕ್ಕೆ ಅಂತರಂಗ ಸಾಕ್ಷಿತ್ವದಲ್ಲಿ ನುಡಿದ ವಚನಗಳನ್ನು ಹೊರಹೊಮ್ಮಿಸುತ್ತ ಬದುಕನ್ನು ಸಾರ್ಥಕಗೊಳಿಸುವುದರಲ್ಲಿ ತೊಡಗಿದರು. ನೂರ್ತೊಂಬತ್ತೊಂದು ವಚನಕಾರರು ಮತ್ತು ಅಸಖ್ಯ ಶಿವಭಕ್ತರೂ (1 ಲಕ್ಷ 96 ಸಾವಿರ) ಅನುಯಾಯಿಗಳು ಕಲ್ಯಾಣದಲ್ಲಿ ಆಶ್ರಯ ಪಡೆದ ಅಂಶವೇ ಬಸವಣ್ಣನ ಶಕ್ತಿ, ಸಾಮರ್ಥ್ಯಗಳನ್ನು ಒತ್ತಿ ಹೇಳುತ್ತವೆ.

ಬಸವಣ್ಣನಲ್ಲಿ ಮುಖ್ಯವಾಗಿ ಸುಧಾರಣೆ ತರುವ ಅನೇಕ ಗುಣಗಳಿದ್ದವು. ತ್ಯಾಗ, ನ್ಯಾಯನಿಷ್ಠುರತೆ, ಛಲ, ಭಕ್ತಿ, ಸತ್ಯಶುದ್ಧ ಕಾಯಕ ಇತ್ಯಾದಿ ಅನೇಕ ಅಂಶಗಳ ತವರೂರಾಗಿದ್ದ. ತುಂಬ ಚತುರಮತಿಯೂ, ಭಾವಜೀವಿಯೂ ಆದ ಬಸವಣ್ಣನಲ್ಲಿ ಮಾನವೀಯ ಸೌಹಾರ್ದ ತುಂಬಿ ತುಳುಕುತ್ತಿತ್ತು ಈ ಅನೇಕ ಗುಣಗಳೇ ಕರ್ನಾಟಕದ ಇತಿಹಾಸ ಗುರುತಿಸಬಹುದಾದಂತಹ ನಾಯಕನನ್ನು ಆಂದೋಲನವನ್ನು ಉಂಟುಮಾಡಿದವು. ಅಸಮತೆಯ ಬೀಜದಂತಿದ್ದ ಬ್ರಾಹ್ಮಣ್ಯವನ್ನು ನಿರಾಕರಿಸುವುದರ ಮೂಲಕ ಅಂದರೆ ಜನ್ನಿವಾರವನ್ನು ತೆಗೆಯುವುದರ ಮೂಲಕ ವರ್ಣವ್ಯವಸ್ಥೆಯನ್ನು ದಾಟಿದ್ದಾನೆ. ಸರ್ವಾಧಿಕಾರದ ರಾಜಾಡಳಿತ ಇದ್ದಾಗಲೇ ತರುಣ ಬಸವಣ್ಣನಾಗಿದ್ದಾಗಲೇ ಈ ಕಾರ್ಯ ಅವನಿಂದಾದುದು ಅವನ ಧೋರಣೆಯ ಮುಂದಿನ ಭವಿತವ್ಯದ ದಿಕ್ಸೂಚಿ.

ರಾಜಸತ್ತೆಯ ಆಶ್ರಯದಲ್ಲಿದ್ದು ಪ್ರಧಾನ ಸ್ಥಾನದಲ್ಲಿದ್ದೂ 'ಆನೀ ಬಿಜ್ಜಳಂಗಂಜುವೆನೇ' ಎಂಬ ಧೈರ್ಯದ, ಚಕ್ರವರ್ತಿ ವಿರೋಧಿ ಧೋರಣೆಗಳು ಬಸವಣ್ಣನನ್ನು ನಾಯಕನನ್ನಾಗಿಸಿವೆ. ವರ್ಣವ್ಯವಸ್ಥೆ ಮರಿಯಿಕ್ಕುವ ಅಸಮತೆಯನ್ನು ವಿರೋಧಿಸುವ ಬಸವಣ್ಣನಿಗೆ ಇದೇ ಧೋರಣೆಯುವರು ಮತ್ತು ಕೆಳನೆಲೆಯುವರು ಬೆಂಬಲ ಕೊಟ್ಟು ಈ ಮುತ್ಸದ್ಧಿಯನ್ನು ತಮ್ಮ ನಾಯಕನನ್ನಾಗಿ ಆರಿಸಿಕೊಂಡರು. ಸಮರ್ಥ ನಾಯಕನನ್ನು ಆರಿಸಿದಂತೆ ಒಪ್ಪಿಕೊಳ್ಳುವುದರ ಮೂಲಕ ಅವರಿಂದ ಚಳುವಳಿ ಯಶಸ್ವಿಯಾಗಿ ನಡೆಯಿತು. ಆದರೆ ಅನುಯಾಯಿಗಳ ಸಣ್ಣ ಸಂಖ್ಯೆಯಿಂದಾಗಿ ಸೋಲೊಪ್ಪಿತು.

ಜಂಗಮಕ್ಕೆ ಬಸವಣ್ಣ ಕೊಟ್ಟ ಅತಿ ಪ್ರಾಮುಖ್ಯತೆಯೇ ಚಳುವಳಿಯ ವಿಫಲತೆಗೆ ಕಾರಣವಾಯಿತು. ಅಲ್ಲದೆ ಶಿವಭಕ್ತಿಯ ಚೌಕಟ್ಟಿನಿಂದಾಗಿ ಇತರ ಸಮಾಜದೊಂದಿಗೆ ಬೇರೆಯಾಯಿತು. ಮಿತಿಯನ್ನು ಪಡೆಯಿತು. 'ಶ್ರೀ ಶಿವ ಲಿಂಗದೇವರು ಅಂಗದ ಮೇಲೆ ಉಳ್ಳವರ ಬಾಯತಾಂಬುಲವ ಮೆಲುವೆನು' (೧೦೫೮) ಅಶನ, ಶಯನ, ಮಜ್ಜನ, ಭೋಜನ, ಇಂತಿವನು ಗುರುಲಿಂಗ ಜಂಗಮಸಹಿತ ಭೋಗಿಸುವ ಸದ್ಭಕ್ತಂಗೆ ನಾನು ನಮೋ ನಮೋ ಎಂಬೆನು. (೧೦೮೫). ಜಂಗಮದ ಪ್ರಸಾದವನು ಲಿಂಗಕ್ಕೆ ಸಲ್ಲದೆಂದು ಶಂಕಿಸಲಾಗದು. (೧೨೪೮) ಈ ಧೋರಣೆಗಳಿಂದಾಗಿ ಚಳುವಳಿಗೆ ಒಂದುದೊಡ್ಡ ಪೆಟ್ಟುಬಿತ್ತು. ನಿಜ ಒಂದು ಚಳುವಳಿ ಯಶಸ್ವಿಯಾಗಬೇಕಾದರೆ ಕೆಲವು ಸೂತ್ರಗಳನ್ನು ಆಚ ರಣೆಯಲ್ಲಿ ತರಬೇಕಾಗುತ್ತದೆ. ಆ ಮಿತಿಯಲ್ಲಿ ಅದು ಹೊರಹೊಮ್ಮಬೇಕಾಗು ತ್ತದೆ. ಆದರೆ ಆ ಸೂತ್ರಗಳೇ ಮಿತಿಯ ಪರಿವಲಯವಾಗಿ ಬಹುಬೇಗನೆ ಸೋಲೊಪ್ಪಿಕೊಳ್ಳುವಂತೆ ಮಾಡುತ್ತವೆ.

ಹುಸಿ ಜಂಗಮವಿರೋಧಿ ಧೋರಣೆಗಳೂ ಅವನಲ್ಲಿದ್ದವು. ಕಲ್ಲ ತೆಕ್ಕೊಂಡು ಮೆಳೆಯ ಮೇಲೆ ಇಟ್ಟಡೆ, ಆ ಕಲ್ಲು ಮೆಳೆಯಲ್ಲಿ ಸಿಕ್ಕಿದಡೆ ಆಮೆಳೆ ಭಕ್ತನಾಗ ಬಲ್ಲುದೆ ? (೧೦೩೬) ಆಡಂಬರದ ಲಾಂಛನದ ವೇಷವಧರಿಸಿ, ಗ್ರಾಸಹೊರೆದು, ಗುಹ್ಯಲಂಪಟ ಹೆಚ್ಚಿ ಆ ಭಕ್ತನ ಕ್ರಿಯಾಶಕ್ತಿಗೆ ಭ್ರಮಿಸುವನೊಬ್ಬ ಚರ ಪ್ರಾಣಿಯ ಜಡಜಂತು ವೆಂಬೆನಯ್ಯ (೧೧೨೫) ಎನ್ನುತ್ತಾರೆ. ಆಚರಣೆಯಿಲ್ಲದೆ ಪರಾವಲಂಬಿಯಾಗಿ ಬದುಕುವ ಜಂಗಮನನ್ನು ಚರಪ್ರಾಣಿ, ಜಡಜಂತು ಎಂದು ಸಂಭೋದಿಸುವುದನ್ನು ಇಲ್ಲಿ ಗಮನಿಸಬೇಕು.

**ಅಲ್ಲಮ ಪ್ರಭು :**

ಹುಟ್ಟಿದ್ದು ನಟುವರ ಜನಾಂಗದಲ್ಲಿ. ತನ್ನ ಕುಲಕಸುನಾದ ಮೃದಂಗ ವಿದ್ಯೆಯಲ್ಲಿ ಆತ ಪಾರಂಗತ. ದೇವಾಲಯದ ಬಳಿ ಮೃದಂಗ ನುಡಿಸುವಲ್ಲಿ ಆಕ ಸ್ಮಿಕವಾಗಿ ಸಂಧಿಸಿದ ಧನದತ್ತನ ಮಗಳೊಂದಿಗೆ ಪ್ರೇಮ ಬೆಳೆದು ಲೋಕದ ವಿರೋಧ ಕಟ್ಟುಕೊಂಡು ಮದುವೆಯಾದ. ಅಲ್ಲಮನಲ್ಲಿ ಕೂಡ ವರ್ಣವ್ಯವಸ್ಥೆ ಯನ್ನುದಾಟುವ ಸಾಮರ್ಥ್ಯವನ್ನು ಇಲ್ಲಿ ಕಾಣಬಹುದು. ಆತನ ಕಾಮಲತೆ (ಪ್ರೀತಿಯ ಪತ್ನಿ) ವರ್ಣವ್ಯವಸ್ಥೆಯ ಉಸುಬಿನಿಂದಾಗಿ ಅಗಲಿದಳು. ನಂತ

ರದ ಅಲ್ಲಮನ ಬದುಕು ತದ್ವಿರುದ್ಧವಾಯಿತು. ಅಲ್ಲಮ ಸಾಧನೆಯಮೂಲಕ ಅನಿಮಿಷಯ್ಯನಿಂದ ಲಿಂಗಪಡೆದು (?) ಪ್ರಭುವಾದ. ಆತನ ಸಾಧನಾ ಬದುಕು ಅನೇಕ ರೀತಿಯ ತುಮುಲಗಳಿಂದ ಆವೃತವಾಗಿದೆ.

ಸೆರಗನು ಹಿಡಿದು ಸೀರೆಯ ಹರಿದ
ಹುಟ್ಟ ಮುರಿದು ಕಂದಲನೊಡೆದ
ಭಂಡನವ್ವ ಅಚ್ಚ ಭಂಡನವ್ವಾ.
ಆಯುಷ್ಯ ಹಿರಿದು ಭಾಷೆ ಕಿರಿದು
ಕಂಡರೆ ನುಡಿಸದಿರೆಲೆ ಮಯಾದೇವಿ
ಭವಗೆಟ್ಟು ಹೋದ ಗುಹೇಶ್ವರಲ್ಲಯ್ಯಂಗೆ
ಮೂಗಿಲ್ಲ ಮಗಳೆ.

ಬಸವಣ್ಣನ ವಚನಗಳಲ್ಲಿ ಕಂಡುಬರುವ ಭಾವತೀವ್ರತೆ, ಮನಸಿನ ಆಂದೋಲನೆಗಳೆಲ್ಲ ಇಲ್ಲೂ ವ್ಯಕ್ತವಾಗಿವೆ. ಆದರೆ ಅಲ್ಲಮನಲ್ಲಿ ಇಂತಹ ವಚನಗಳು ತುಂಬ ಕಡಿಮೆ. ಭಾವತೀವ್ರತೆ ಇದ್ದ ತನ್ನಮನಸ್ಸನ್ನು ತಾನು ಪರೀಕ್ಷಿಸಿಕೊಳ್ಳುವ, ಆಂತರಿಕ ತಳಮಳ ಅಲ್ಲಮನ ಬದುಕಿನಲ್ಲಿ ಸಾಧನಾ ಹಂತದಲ್ಲಿ ಮಾತ್ರ ಇದ್ದವು. ಆತ ಸಿದ್ಧ ಪುರುಷನಾದ ಮೇಲೆ ಆತನ ಮಾತಿನಲ್ಲಿ ಆಜ್ಞೆಯ ಪ್ರಭುವಾಣಿ ಇದೆ. ಬಸವಣ್ಣ, ಅಕ್ಕರಲ್ಲಿ ಕಂಡುಬರುವಂತೆ ಭಾವತೀವ್ರತೆಗಳು ಅಲ್ಲಿಲ್ಲ. ಭಾಷೆಯೊಂದಿಗೆ ಆಟವಾಡುತ್ತಾನೆ. ಈ ಸಾಮರ್ಥ್ಯ ವಚನಕಾರರಲ್ಲಿ ಅಲ್ಲಮನಿಗೆ ಮಾತ್ರ ಸಾಧ್ಯಆಯಿತು.

ನಟುವರ ಕುಲದವನು ಧರ್ಮಸಂಸ್ಕಾರ ಪಡೆದು, ಯೋಗಿಯಾದದ್ದೇ ವರ್ಣ ವ್ಯವಸ್ಥೆಯನ್ನು ದಾಟುವುದರಿಂದ. ಈ ದಾಟುವಿಕೆ ಅಲ್ಲಮನಲ್ಲಿ ಆವನ ಬದುಕಿನಲ್ಲಿ ಹಾಸುಹೊಕ್ಕಾಗಿದೆ. ಸ್ವಯಂ ತಾನು ವರ್ಗವರ್ಣದ ಅಂತರ ಕಡಿಮೆಮಾಡಲು ತುಡಿದ. "ಶೈವನಾದಡೇನು? ಸನ್ಯಾಸಿಯಾದಡೇನು? ಭೋಗಿಯಾದಡೇನು ? ಯೋಗಿಯಾದಡೇನು? ಅಶನವ ತೊರೆದಾತ ವ್ಯಸನವ ಮರೆದಾತ ನಮ್ಮ ಗುಹೇಶ್ವರದಲ್ಲಿ ಹಿರಿಯರು"ಎಂದು ನಡೆದ. ಅದರಿಂದಲೇ ಬಸವಣ್ಣನಂತಹಮಹಾನುಭಾವಿ, ಮಾನವತಾವಾಗೆ ಈತ ಬೆಂಬಲವಾಗಿ ನಿಲ್ಲಲು ಸಾಧ್ಯ ಆಯಿತು. ಕೀಳು ಕುಲದ ಗಂಡು ಮೇಲು ಕುಲದ ಹೆಣ್ಣನ್ನು ಮದುವೆಯಾಗುವ

ವರ್ಣ ಸಮನ್ವಯ ಚಟುವಟಿಕೆಯನ್ನು ಬಸವಣ್ಣನೊಂದಿಗೆ ಸೇರಿಕೊಂಡು ನಡೆಸಿದ. ಇತಿಹಾಸ ಅದುವರೆಗೆ ಕಾಣದಂತ ವಿಲೋಮವಾದ ವಿವಾಹ ಬಾಂಧವ್ಯ ವಚನಕಾರರ ಕಾಲದಲ್ಲಿ ಪ್ರಥಮವಾಗಿ ಬೆಳಕಿಗೆಬಂತು. ಅಲ್ಲಮ, ಬಸವಣ್ಣ ಈ ಮಹಾನ್ ಮಾನವತಾವಾದಿಗಳು ಕನ್ನಡ ನೆಲದಲ್ಲಿ ಕ್ರಾಂತಿಹೆಜ್ಜೆ ಇಟ್ಟವರು. ಅವರ ವಚನಗಳು, ಬದುಕು ಇವುಗಳಿಂದ ನಂತರದ ಸಾಹಿತ್ಯ ಹೊಸ ಹುಟ್ಟು ಪಡೆಯಿತು. ಈ ಪ್ರಭಾವದಿಂದಾಗಿ ಕನ್ನಡ ಸಾಹಿತ್ಯದ ದಿಕ್ಕೇ ಬದಲಾಯಿತು. ವಚನಕಾರರು ಉಂಟಾಗದಿದ್ದರೆ ನಮ್ಮ ಕನ್ನಡ ಸಾಹಿತ್ಯ ಚಂಪೂಸಾಹಿತ್ಯದ ಕೊರಕಲಿನಲ್ಲಿ ಬಂಜರಾಗಿ ಉಳಿಯುತ್ತಿತ್ತೋ ಏನೋ? ಷಟ್ಪದಿ ಪ್ರಕಾರವೊಂದು ಹೊರ ಹೊಮ್ಮುತ್ತಿತ್ತೊ ಇಲ್ಲವೋ ತಿಳಿಯದು. ವರ್ಣ ಭದ್ರವಾದ ಸಾಮಾಜಿಕ ವ್ಯವಸ್ಥೆ ಅವುಗಳಿಗೆ ಹಿನ್ನೆಲೆಯಾಗಿ ನಿಂತ ರಾಜ ಪ್ರಭುತ್ವಗಳನ್ನು ವಚನಕಾರರು ಧಿಕ್ಕರಿಸಿದರು. ಈ ಪರಿಣಾಮವಾಗಿಯೇ ಮುಂದೆ ಹರಿಹರನಂತಹ ಕವಿಗಳು ರಾಜನನ್ನು ಧಿಕ್ಕರಿಸಿ ಹೋಗುವ ಚಾತಿ ತೋರಿದರು. ಅದುವರೆಗೆ ರಾಜನನ್ನು ವೈಭವಿಸಿ ಪುರಾಣ ಕೃತಿಗಳನ್ನು ಬರೆಯುವುದನ್ನುಬಿಟ್ಟು ಆಗಿಹೋದ ಶ್ರೀ ಸಾಮಾನ್ಯನನ್ನು ಸಾಹಿತ್ಯದಲ್ಲಿ ಚಿತ್ರಿಸುವ ಸಂದರ್ಭ ಒದಗಿಬಂತು. ವಚನ ಕಾರರು ಉಂಟಾಗದಿದ್ದಲ್ಲಿ ಮಾದರ ಚೆನ್ನ, ಕಂಬಳಿನಾಗಿದೇವ, ಡೋಹರಕಕ್ಕ ಸಮಗಾರ ಹರಳಯ್ಯಮುಂತಾದ ಅಸ್ಪೃಶ್ಯವರ್ಗ ಸಾಹಿತ್ಯದ ವಸ್ತುವಾಗಬೇಕಿದ್ದರೆ ಇನ್ನೆಷ್ಟು ಕಾಲ ಕಾಯಬೇಕಾಗುತ್ತಿತ್ತೋ ಏನೊ?

### ವಚನಕಾರರ ಆಂದೋಲನದ ಸ್ವರೂಪ

1040 ರಲ್ಲಿದ್ದ ದೇವರ ದಾಸಿಮಯ್ಯ ಜಯಸಿಂಹನ ಪತ್ನಿ ಸುಗ್ಗಲೆಗೆ ಶೈವದೀಕ್ಷೆ ಕೊಟ್ಟ ಪ್ರಸಂಗ ಶೈವಧರ್ಮ ಪ್ರಚಾರಕಾರ್ಯದ ಮೊದಲಹಂತವಾಗಿದೆ. ಶೈವೇತರರನ್ನು ಶೈವರನ್ನಾಗಿ ಪರಿವರ್ತಿಸುವ ಸಾಮಾಜಿಕ ಹಂತದಲ್ಲಿ ಕೆಳಗಿದ್ದವರನ್ನು ಶೈವದೀಕ್ಷೆಕೊಟ್ಟು ಆ ಪರಿವಲಯದೊಳಗೆ ಸೇರಿಸಿಕೊಳ್ಳುವ ಚಟುವಟಿಕೆ ಸಾಮಾಜಿಕ ಸ್ವರೂಪ ಪಡೆದುದಾಗಿದೆ. ಮತಾಂತರ ನಡೆದಾಗ ಬೇರೆ ವರ್ಣದವರನ್ನು ಸೇರಿಸಿಕೊಂಡು ಧರ್ಮ ಪ್ರಚಾರ ನಡೆಯಬೇಕಾಗುತ್ತದೆ. ಇತರ ಧರ್ಮ ಮಾಡಲಾರದಿದ್ದುದಕ್ಕಿಂತ ಒಂದು ಹೆಜ್ಜೆ ಮುಂದೆ ಇಟ್ಟಾಗ ಜನತೆ

ಪ್ರಗತಿಪರ ನಿಲುವುಗಳನ್ನು ಗಮನಿಸಿ ಅತ್ತ ಧಾವಿಸಿ ಬರುತ್ತಾರೆ. ಈ ಕಾರ್ಯ ದೇವರದಾಸಿಮಯ್ಯ ಮೊದಲುಗೊಂಡು ಶಂಕರದಾಸಿಮಯ್ಯ, ಸಕಲೇಶ ಮಾದರಸ, ಜೇಡರದಾಸಿಮಯ್ಯ ಇತ್ಯಾದಿಗಳವರಿಂದ ನಡೆದಿದೆ. ವಚನಕಾರ ಜೇಡರ ದಾಸಿಮಯ್ಯ "ಕೀಳು ಡೋಹರ ಕಕು ಕೀಳು ಮಾದರಚೆನ್ನ ಕೀಳು ಓಹಿಲಯ್ಯ, ಕೀಳು ಉದ್ಭಟಯ್ಯ. ಕೀಳಿಂಗಲ್ಲದೆ ಹಯನು ಕರೆಯದು"[6] ಎಂದು ಹೇಳಿದ್ದಾನೆ. ಈ ವಚನ ಬರೆಯುವ ಕಾಲಕ್ಕೆ ಕೀಳುಕುಲದ ಕಕ್ಕಯ್ಯ, ಚೆನ್ನಯ್ಯ ಇವರುಗಳು ಶೈವ ಧರ್ಮದೀಕ್ಷೆಯನ್ನು ಪಡೆದರೆಂದು ವಿದಿತವಾಗುತ್ತದೆ. ಕೀಳಿಂಗಲ್ಲದೆ ಹಯನು ಕರೆಯದು ಎಂಬ ಮಾತಿನಲ್ಲಿ ದೇವನ ಮುಂದೆ ಎಲ್ಲರೂ ಕೀಳು ಎಂಬ ಧ್ವನಿಇದೆ. ಜೊತೆಗೆ ಕಕ್ಕಯ್ಯ, ಚೆನ್ನಯ್ಯರು ಕೀಳಾಗಿದ್ದು ಅನುಗ್ರಹ ಪಡೆದರೆಂಬ ಅರ್ಥವಿದೆ. ಸಾಮಾಜಿಕವಾಗಿ ಕೆಳಹಂತದಲ್ಲಿದ್ದವರಿಗೆ ಧಾರ್ಮಿಕ ಸಂಸ್ಕಾರ ನೀಡಿ ತಲೆಯೆತ್ತುವಂತೆ ಮಾಡುವುದು ಶೈವಧರ್ಮದ ಚಟುವಟಿಕೆಗಳಲ್ಲಿ ಒಂದು.

ವಚನಕಾರರಿಗೆ, ಶಿವನ ಆರಾಧಕರಿಗೆ ಮೂಲ ಬಲ, ಪ್ರೇರಣೆ ತಮಿಳುನಾಡಿನ ಪುರಾತನರಿಂದ ಬಂದಿದೆ. ಅಲ್ಲಿ ವಿವಿಧ ಕುಲ, ಕಾಯಕಗಳಿಂದ ಬಂದವರು ಶೈವಧರ್ಮದಡಿಯಲ್ಲಿ ಒಂದಾದರು. ಶಿವಭಕ್ತರು ಮೆಚ್ಚುವ ಬಗತನ ನಡೆಸಿದರು. ಈ ಒಂದಾಗುವಿಕೆಯೇ ಸಾಮಾಜಿಕವಾಗಿ ಮೇಲೆತ್ತುವ ಕಾರ್ಯ. ಅತಿಭಕ್ತ ಏಣಾದಿನಾಯಾರ್, ಕಣ್ಣಪ್ಪನಾಯನಾರ್, ಕಲಿಯನಾಯನಾರ್, ಶತ್ತಿಯನಾಯನಾರ್, ತಿರುಕ್ಕುರ ತೊಂಡರ್, ತಿರುನಾಳ್ ಪೋವರ್ ಇವರುಗಳೆಲ್ಲ ಬೆಸ್ತ, ಶೂದ್ರ, ಬೇಡ, ಗಾಣಿಗ, ಒಕ್ಕಲಿಗ, ಅಗಸ, ಚಮ್ಮಾರ ಕುಲದವರು. ಇವರಿಗೆ ಶಿವಭಕ್ತಿಯಿಂದ ಶಿವದೀಕ್ಷೆಯಿಂದ ಪೂಜ್ಯಸ್ಥಾನ ದೊರೆಯಿತು. ಭಕ್ತಿ ಇದ್ದ ಯಾವ ಕುಲದವನೂ ಅವನನ್ನು ಒಲಿಸಿಕೊಳ್ಳಬಹುದು. ಆತ ಇತರರಿಗೆ ದಾರಿದೀಪ, ಗುರು ಎಂಬುದು ಇವರಿಂದ ಪ್ರಚಲಿತಕ್ಕೆ ಬಂತು. ದೇವರ ದಾಸಿಮಯ್ಯ[7] ಕೂಡ (ಬಸವನಪುರಾಣದಲ್ಲಿ ಉಕ್ತವಾದಂತೆ) ಕುಲ, ಶೀಲಗಳನ್ನು ಅಲ್ಲಗಳೆಯುತ್ತಾನೆ.

6 ದೇವರ ದಾಸಿಮಯ್ಯನ ವಚನಗಳು (ಸಂ. ಎಲ್. ಬಸವರಾಜು)
7 ದೇವರ–ಜೇಡರ ದಾಸಿಮಯ್ಯರು ಬೇರೆ ಬೇರೆ ಕಾಲದವರು

ದೇವನೊಲಿದ ಮೇಲೆ ಕುಲ ಯಾತರದು. ಇದೇ ಧ್ವನಿ ಉಳಿದೆಲ್ಲ ಶಿವಭಕ್ತರಲ್ಲಿ ಪ್ರತಿಧ್ವನಿತವಾಗಿದೆ.

ಶೈವಧರ್ಮ, ತನ್ನ ಅನುಯಾಯಿಗಳು ಸಮಾಜದಲ್ಲಿ ತಲೆಯೆತ್ತುವಂತೆ ಮಾಡಿತು. ಸಮಾಜದ ವ್ಯವಸ್ಥೆಯ ಬಗೆಗೆ ಆಲೋಚನೆ ಮಾಡುವಂತೆ ಮಾಡಿತು. ಹಲವಾರು ಶಾಸ್ತ್ರೋಕ್ತ ವಿಧಿ, ಕಟ್ಟು ಕಟ್ಟಳೆಗಳು ಆಚರಣೆಯನ್ನು ಪ್ರಶ್ನಿಸುವಂತೆ ಮಾಡಿತು. ವ್ಯಕ್ತಿಯನ್ನು ಆಲೋಚನೆಗೆ ಹಚ್ಚಿದ್ದು ಶೈವಧರ್ಮ. ದೇವರ ದಾಸಿಮಯ್ಯ ಅವನ ಹೆಸರೇ ಹೇಳುವಂತೆ ನೇಯ್ಗೆಯವನೇ ಆಗಿದ್ದಾನೆ. ಈತ ರಾಜನ ಪತ್ನಿಗೆ ದೀಕ್ಷೆ ಕೊಟ್ಟ. ಜೈನರೊಂದಿಗೆ ವಾದ ಮಾಡಿದ ಕೆಲವರನ್ನು ಶೈವಧರ್ಮಕ್ಕೆ ಪರಿವರ್ತಿಸಿದ ಘಟನೆ ಶೈವಧರ್ಮದ ಅನುಯಾಯಿಗಳು ಪಡೆದುಕೊಳ್ಳುತ್ತಿದ್ದ ಸ್ಥಾನ ಮಾನಗಳಿಗೆ ದಿಕ್ಸೂಚಿಯಾಗಿದೆ. ಶಂಕರದಾಸಿಮಯ್ಯ, ಜೇಡರದಾಸಿಮಯ್ಯ ಇವರು ಕೂಡ ವರ್ಣವ್ಯವಸ್ಥೆಯ ಏಟು ತಿಂದವರೇ. ಆದರೂ ಶಿವ ಧರ್ಮದಡಿಯಲ್ಲಿ ಜನರನ್ನು ಎಚ್ಚರಿಸುತ್ತ ನೀವೂ ಮನುಷ್ಯರು, ನಿಮಗೂ ಎಲ್ಲ ಹಕ್ಕಿದೆ ಎಂದು ಸ್ತ್ರೀ ಪುರುಷರೆನ್ನದೆ ಎಲ್ಲರಿಗೂ ತಿಳಿಸುತ್ತಿದ್ದರು. ಮಾದಾರನಾಗಿದ್ದರೂ ಆ ಶೈವ ಭಕ್ತಿಯಿಂದಾಗಿ ರಾಜನಿಂದ ಪುರಸ್ಕೃತನಾಗುತ್ತಾನೆ. ಕೊಂಡಗುಳಿ ಕೇಶಿರಾಜ, ತೆಲುಗು ಜೊಮ್ಮಯ್ಯ ಈ ಮುಂತಾದವರು ಅಧಿಕಾರ, ದರ್ಪಗಳಿಗೆ ಸೊಪ್ಪು ಹಾಕದೆ ಇದಕ್ಕಿಂತ ಶಿವ ದೊಡ್ಡವನೆಂದು ಶಿವಭಕ್ತಿಯ ದಾರಿಯಲ್ಲಿ ಎದೆಸೆಟೆಸಿ ನಡೆಯುವುದನ್ನು ಕಾಣುತ್ತೇವೆ.* ಈ ಎಲ್ಲ ಚಟುವಟಿಕೆಗಳು ವಚನಕಾರರಿಗೆ ಬೆಳಕಿನ ಹೆಜ್ಜೆಗಳಾಗಿವೆ. ಬಸವಣ್ಣ ಮುಂತಾದ ನಾಯಕರುಗಳು ತಾವು ಮುಂದೆ ನಡೆಯಬಹುದಾದ ದಾರಿಯನ್ನು ಇದರಿಂದ ಕಂಡುಕೊಂಡಿದ್ದಾರೆ.

ವಚನಕಾರರದು ಧಾರ್ಮಿಕ ಆಂದೋಲನವಾದರೂ ಧರ್ಮದ ಸಾಮಾಜಿಕ ಪರಿವಲಯದಲ್ಲಿ ಚಾಚಿಕೊಂಡಿರುವುದರಿಂದ ಅದು ಸಾಂಸ್ಕೃತಿಕವಾಗಿ

---

* "ಸೇವಕನ ವೃತ್ತಿಯುಂ ಮನದ ಕಾಳಿಂದೊದೆದು, ದೇವಸೋಮಯ್ಯನಂ ಚಿತ್ತ ಹಸ್ತದಿ ಪಿಡಿದು" ಹರಿಹರನ ರಗಳೆಗಳು, ಪುಟ 301 (ಸಂ. ಫ. ಗು. ಹಳಕಟ್ಟಿ)

ಹಿಮುಳಿದವರನ್ನು ಮೇಲೆತ್ತುವುದರಲ್ಲಿ ಕೂಡಿದೆ. ವಚನಕಾರರ ಧಾರ್ಮಿಕ ಆಂದೋಲನ ಕಾರ್ಯ ಆರಂಭವಾದುದು ವರ್ಣವ್ಯವಸ್ಥೆಯ ಏಟುತಿಂದವರಿಂದಲೆ. ಯಾರಿಗೆ ಸಮಾಜದಲ್ಲಿ ಅವಕಾಶಗಳು ಇರುವುದಿಲ್ಲವೋ ಅವರು ತಲೆಯೆತ್ತಿ ಬದುಕುವುದೂ ಕೊನೆಗೆ ಉಳಿಯುವುದೂ ಕಷ್ಟವಾಗುತ್ತದೋ ಆಗ ಆವರು ಆ ವ್ಯವಸ್ಥೆಯ ನಿಯಮಗಳನ್ನು ಪ್ರಶ್ನಿಸಿ ಸೆಟೆದೇಳುತ್ತಾರೆ. ತಮಿಳು ಪುರಾತನ ಕಾಲದಲ್ಲಿ ಆದದ್ದಾದರೂ ಹೀಗೆಯೆ. ಅಲ್ಲಿ ಧಾರ್ಮಿಕ ಆಂದೋಲನ ತಂದ ವರೂ ಅವರೇ ಆಗಿದ್ದಾರೆ. ಅಲ್ಲದೆ ಅದನ್ನು ಯಶಸ್ವಿಗೊಳಿಸಿದವರು ಅವರೆ. ಯಾವುದೇ ರೀತಿಯ ಆಂದೋಲನ ಕೂಡ ಆರಂಭವಾಗುವುದು ಕೆಳಹಂತದಿಂದಲೆ ಈ ಜನ ಎಲ್ಲದಕ್ಕೂ ಸಿದ್ಧಗಿರುತ್ತಾರೆ. ಯಾಕೆಂದರೆ ಈ ಮುಂಚೆ ವ್ಯವಸ್ಥೆಯಿಂದ ಏಟುತಿಂದು ತಿಂದು ರೋಸಿ ಹೋಗಿ ಅವರಿಗೆ ಒಂದು ಭಂಡ ಧೈರ ಬಂದಿರುತ್ತದೆ. ಇದರಿಂದ ಏನು ಬಂದರೂ ಅದನ್ನು ಇದಿರಿಸೋಣ ಎಂಬ ನಿಲುವು ಅವರಿಂದ ಬರುತ್ತದೆ. ಯಾಕೆಂದರೆ ಇನ್ನು ಇದಕ್ಕಿಂತ ಹೆಚ್ಚು ಕೀಳಾಗಿ ಬವಣೆ ಪಡುವುದು ಇಲ್ಲವೇ ಇಲ್ಲ ಎನ್ನುವಷ್ಟು ದುಃಖ ದುಮ್ಮಾನದಲ್ಲಿ ಬಂದ ಜನಗಳಿಗೆ ಸುಖದ ಬಿಸಿಲು ಸಿಕ್ಕಿತೆಂಬ ಆಶಯದಿಂದ ಸಿಡಿದು ನಿಲ್ಲುತ್ತಾರೆ. ಅದೇ ವರ್ಣವ್ಯವಸ್ಥೆಯ ಲಾಭ ಪಡೆದ ಜನ ಇಂಥದನ್ನು ಹತ್ತಿಕ್ಕುವುದರಲ್ಲಿ ಮುಂದಾದರೂ ಇದನ್ನು ಇಲ್ಲಿ ಮಾಡುವ ಸ್ಥೈರ್ಯವನ್ನು ನೈತಿಕವಾಗಿ ಕಳೆದುಕೊಂಡಿರುತ್ತಾರೆ. ಇತ್ತ ಬಡವರೂ ಅಲ್ಲದ ಶ್ರೀಮಂತರು ಅಲ್ಲದ ಮಧ್ಯಮ ವರ್ಗದ ಜನರಿಗೆ ಸಿಡಿದೇಳುವ ಸ್ಥೈರ್ಯವೂ ಇರದು. ಹತ್ತಿಕ್ಕುವ ಬಲವೂ ಇರದು. ಕ್ರಾಂತಿ ಆಂದೋಲನ ಇವರಿಂದ ನಡೆಯುವುದಿಲ್ಲ. ಆದರೆ ಬೆಂಬಲ, ನೆರವುಗಳು ಸಿಗುತ್ತವೆ. ಈ ನೆರವು ಯಾವ ಕಡೆ ಬೇಕಾದರೂ ದೊರೆಯುತ್ತದೆ. ರಷಿಯದಲ್ಲಿ ನಡೆದ ಕ್ರಾಂತಿ ಕೆಳವರ್ಗದಿಂದ ಆರಂಭವಾದುದು. ಇನ್ನು ತಾವು ಬದುಕಲು ಸಾಧ್ಯವೇ ಇಲ್ಲ, ಬರದಿಂದ ಸಾಯುವುದುಸಿದ್ಧ ಎಂದು ಗೊತ್ತಾದಾಗ ಅವರು ಯೋಚನೆ ಮಾಡುತ್ತಾರೆ. I ನೇ ನಿಕೋಲಸ್‌ ದೊರೆಯನ್ನು ಪ್ರಶ್ನಿಸುತ್ತಾರೆ, ದಂಡಿಸುತ್ತಾರೆ. ಅವನನ್ನು ಕೆಳಗೆ ತಳ್ಳಿ ಬಲಪ್ರಯೋಗದಿಂದ ಸ್ಥಾನಮಾನಗಳನ್ನು ಗಳಿಸಿಕೊಳ್ಳುತ್ತಾರೆ. ಅದರ ಮುಂದಾಳು ಆಗುವವ ಕೂಡ ಸಾಮಾನ್ಯವಾಗಿ ಆ ವರ್ಗದವನೇ ಆಗಿರುತ್ತಾನೆ. ಮಾರ್ಕ್ಸ್, ಲೆನಿನ್ ಇವರೆಲ್ಲ ಕೂಲಿಕಾರರ ಮಕ್ಕಳುಗಳೇ ಆಗಿದ್ದರು.

ಅಂತೆಯೇ ನಮ್ಮಲ್ಲಿ ಬಸವಣ್ಣ, ಅಲ್ಲಮ, ಸಿದ್ಧರಾಮ, ದೇವರದಾಸಿಮಯ್ಯ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ ಇವರು ಕೂಡ ಆರ್ಥಿಕವಾಗಿ ಸುಸ್ಥಿತಿಯಲ್ಲಿರದ ನೆಲೆಯಿಂದ ಬಂದವರು.

ಯಾವತ್ತೂ ಕ್ರಾಂತಿಯ ಉದ್ದೇಶ ತಮಗೆ ಇಲ್ಲದ ಹಕ್ಕುಗಳನ್ನು ಪಡೆಯುವುದೇ ಆಗಿದೆ. ಅದನ್ನು ಪಡೆಯುವವರು, ಪಡೆಯಬೇಕಾದವರು ಕೆಳವರ್ಗದವರು. ಇದಕ್ಕಾಗಿ ಎಂಥ ದಾರಿಯಲ್ಲಿ ನಡೆಯಲೂ ಇವರು ಸಿದ್ಧರಾಗಿರುತ್ತಾರೆ. ರಾಮಕೃಷ್ಣ, ವಿವೇಕಾನಂದ ಇವರು ಬಂದದ್ದು ಕೂಡ ಆರ್ಥಿಕವಾಗಿ ಸುಸ್ಥಿತಿ ಇರದ ನೆಲೆಯಿಂದ. ರಾಮಕೃಷ್ಣ ಬ್ರಾಹ್ಮಣ ಕುಲದವರಿದ್ದು ಸಾಮಾಜಿಕವಾಗಿ ಸ್ಥಾನಪಡೆದಿದ್ದರೆಂಬ ಮಾತು ಬೇರೆ. ಅಂಬೇಡ್ಕರ್ ಆಂದೋಲನದ ಯಶಸ್ವಿ ನಾಯಕತ್ವಕ್ಕೆ ಜ್ವಲಂತ ಉದಾಹರಣೆ. ವರ್ಗ, ವರ್ಣಗಳೆರಡರ ಏಟು ತಿಂದು ಸಮಾಜದಲ್ಲಿ ಹೊಲೆಯರ, ಕೀಳು ಕುಲದವರ ಸ್ಥಾನಮಾನಗಳು ಎಷ್ಟೊಂದು ನಿಕೃಷ್ಟ ಪರವಲಿಯದಲ್ಲಿವೆ ಎಂಬುದನ್ನು ಅರ್ಥ ಮಾಡಿಕೊಂಡು ಅನುಭವಿಸಿ ಅದನ್ನು ಪಡೆಯಲು ಮುಂದಾದವನು ಈತ. ಅಂತೆಯೇ ವಚನಕಾರರ ಕಾಲದಲ್ಲಿ ಕೂಡ ಸಾಮಾಜಿಕವಾಗಿ ಬಹಳ ಏಟು ತಿಂದ ಜನರು ಎಚ್ಚೆತ್ತರು. ಜನರನ್ನು ಸುವ್ಯವಸ್ಥಿತವಾಗಿ ಆಲೋಚನೆ ಮಾಡುವಂತೆ ಮಾಡಿ ಗುರಿಯನ್ನು ಸಾಧಿಸುವುದರಲ್ಲಿ ಬೇರೊಬ್ಬ ಸಮರ್ಥ ವ್ಯಕ್ತಿ ನಾಯಕನಾಗುತ್ತಾನೆ.

ಬಸವಣ್ಣ ಸಾಮಾಜಿಕವಾಗಿ, ಧಾರ್ಮಿಕವಾಗಿ ಲಾಭಪಡೆದವರು. ಈತ ವ್ಯವಸ್ಥೆಯ ವೈಪರೀತ್ಯಗಳಿಂದ ತನ್ನೊಳಗೆ ಕುದ್ದು ಹೋದವನು. ಮಾನವೀಯ ಹೃದಯ ಇವನಲ್ಲಿ ಇದ್ದುದರಿಂದ ಸಮಾಜದಲ್ಲಿ ಇತರ ಮನುಷ್ಯರಿಗೆ ಆಗುತ್ತಿರುವ ಅನ್ಯಾಯ, ದೌರ್ಜನ್ಯಗಳಿಗೆ ಮಮ್ಮಲ ಮರುಗಿದ. ಬೇಕಾದ ಸ್ಥಾನಮಾನವನ್ನು ಅವರು ಸಮರ್ಥಿಸಿ ಪಡೆಯಲು ಹೊರಟಿದ್ದನ್ನು ಈತ ಎಲ್ಲ ಕಾರಣದಿಂದಲೂ ನ್ಯಾಯಯುತವಾದುದು ಎಂದು ಆಲೋಚಿಸಿ ತಿಳಿದ. ಇದರಿಂದಾಗಿ ಆತ ಸಹಕಾರ ನೀಡಿದರೆ ಇಂತಹವರಿಗೆ ನೀಡಬೇಕೆಂದು ಹಾತೊರೆದ. ಅವರಿಗಾದರೂ ತಮ್ಮ ಆಲೋಚನೆ, ಬೇಡಿಕೆಗಳು ನ್ಯಾಯಸಮ್ಮತವಾದುವೆಂದು ಸಮರ್ಥಿಸುವ ಬೆಂಬಲಿಸುವ ವ್ಯಕ್ತಿಯೊಬ್ಬ ಬೇಕಾಗಿತ್ತು.

ಇದಕ್ಕೆ ಎಲ್ಲರೀತಿಯಿಂದಲೂ ಬಸವಣ್ಣ ಸೂಕ್ತವ್ಯಕ್ತಿಯಾಗಿದ್ದ. ಬಸವಣ್ಣ ಸಾಮಾಜಿಕವಾಗಿ ಸ್ಥಾನಮಾನ ಇದ್ದವನು. ಮೇಲ್ವರ್ಗದವರನ್ನು ಮುನ್ನಡೆಸುವ ವರ್ಣದವನು. ಅಂತಹವನು ಕೀಳು ಕುಲದ, ಕೆಳವರ್ಗದ ನಮ್ಮನ್ನು ಬೆಂಬಲಿಸುತ್ತಾನೆಂದರೆ ಕತ್ತಲೆಯಲ್ಲಿ ದೀಪ ಅರಸುವವನಿಗೆ ಎದುರಿಗೆ ಸಿಕ್ಕಂತಾಯಿತು. ಯಾವತ್ತು ಸ್ಥಾನಮಾನ ಇದ್ದವನು ಇತರರಿಗೆ ಅವುಗಳನ್ನು ಕೊಡಬಲ್ಲ. ಅದನ್ನು ಸಮಾಜ ಒಪ್ಪುತ್ತದೆ. ಅವಿಲ್ಲದವರು ಕೊಡುವುದಾದರೂ ಹೇಗೆ ? ಅಲ್ಲಮ, ಸಿದ್ಧರಾಮ ಅಂಬಿಗರ ಚವುಡಯ್ಯ, ಜೇಡರ ದಾಸಿಮಯ್ಯ ಮಾದರಚೆನ್ನಯ್ಯ, ಡೋಹಕ ಕಕ್ಕಯ್ಯ ಇವರುಗಳು ಯಾಕೆ ನಾಯಕರಾಗಲಿಲ್ಲ ಅಂದರೆ ಬೇರೆಲ್ಲ ಅರ್ಹತೆಗಳಿಗಿಂತ ಮುಂಚೆ ವರ್ಣವರ್ಗಗಳೆರಡೂ ಕಡೆ ಇವರು ಏಟು ತಿಂದವರು. ಇವರಿಗೆ ಯಾವ ಸ್ಥಾನಮಾನಗಳೂ ಇರಲಿಲ್ಲ. ಇವರು ಏನಾದರೂ ಹೇಳಿದರೆ ಇವರ ಮಾತನ್ನು ಸಮಾಜ ಸುಲಭವಾಗಿ ಒಪ್ಪಿಕೊಳ್ಳುವುದಿಲ್ಲ. ಬಸವಣ್ಣ ಮೇಲುಕುಲದಿಂದ ಬಂದು ಇವರನ್ನು ಮಾತನಾಡಿಸುತ್ತಾನೆ. ಇವರ ಜೊತೆ ಉಂಡು ತಿಂದು ವ್ಯವಹರಿಸುತ್ತಾನೆಂದಾಗ ಅಂತಹ ವ್ಯಕ್ತಿಯೊಬ್ಬ ಅವರೆಲ್ಲರಿಗೂ ಬೇಕಾಗಿದ್ದ. ನಂತರ ಆತನ ವ್ಯಕ್ತಿತ್ವ, ಶಕ್ತಿ ಸಾಮರ್ಥ್ಯಗಳ ಈ ದಿಸೆಯಲ್ಲಿ ಹೆಚ್ಚು ಕೆಲಸಮಾಡಿದವು.

"ನನಗೆ ಹನ್ನೆರಡನೆಯ ಶತಮಾನದಲ್ಲಿ ಸುಮಾರು ಮುನ್ನೂರೈವತ್ತು ಪುರುಷಸ್ತ್ರೀ ವಚನಕಾರರು ದೊರೆಯುತ್ತಾರೆ. ಈ ದೊಸಕಿರುವ ವಚನಕಾರರ ಸಂಖ್ಯೆಯೇ ನಮಗೆ ವಿಸ್ಮಯುವನ್ನು ಹುಟ್ಟಿಸುವ ಸಂಗತಿಯಾಗಿದೆ.[8] ಆರ್. ನರಸಿಂಹಾಚಾರ್ಯರು 254 ವಚನಕಾರರ ಸಂಖ್ಯೆ ಇದೆಯೆಂದು ಹೇಳಿದರೆ ಡಾ.ಎಲ್. ಬಸವರಾಜು ಅವರು 4′/4 ಕ್ಕೂ ಹೆಚ್ಚು ವಚನಕಾರರಿದ್ದರೆಂದು ವಚನಕಾರರು ವಚನಾಂಕಿತಗಳನ್ನು ಕೊಡುತ್ತಾರೆ.[9] ವಾಸ್ತವವಾಗಿ ಸದ್ಯ ಲಭ್ಯವಾಗಿರುವ ವಚನಕಾರರ ಸಂಖ್ಯೆ 191 ಮಾತ್ರ.[10] ಆರ್.ನರಸಿಂಹಾಚಾರ್ಯರಾಗಲಿ, ಎಲ್. ಬಸವ

8. ಎಂ. ಚಿದಾನಂದ ಮೂರ್ತಿ : ವಚನ ಸಾಹಿತ್ಯ, ಪುಟ 99 ಮತ್ತು 100.

9. ಎಲ್. ಬಸವರಾಜು : ಶಿವದಾಸ ಗೀತಾಂಜಲಿ, ಪುಟ 303.

10. ಈ ಬಗ್ಗೆ ಅನುಬಂಧ 2ರಲ್ಲಿ ಬೇರೆ ಬೇರೆಡೆ ಸದ್ಯ ಲಭ್ಯವಾಗಿರುವ ವಚನಕಾರರ ಸಂಖ್ಯೆಯ ಪಟ್ಟಿಯನ್ನು ಕೊಟ್ಟಿದ್ದೇನೆ. ಅದನ್ನು ಗಮನಿಸಬಹುದು. ಇನ್ನು ಹೆಚ್ಚು ವಚನಕಾರರ ಸಂಖ್ಯೆ ಸಿಕ್ಕಿದರೆ ನನ್ನ ಅಭಿಪ್ರಾಯ ತಿದ್ದಿಕೊಳ್ಳುವೆ.

ರಾಜು ಅವರಾಗಲಿ ಸಂಖ್ಯೆ ಕೊಟ್ಟಿರುವುದು ವಚನಾಂಕಿತದ ಪ್ರಭೇದಗಳನ್ನು ಗಮನಿಸಿ. ಒಂದೇ ಅಂಕಿತ ಸಿಕ್ಕೂ ಬೇರೆಯಾಗಿ ದೊರೆಯುವುದನ್ನು ಎಂಟು ಸಲ ಕೊಡುವುದರಿಂದ ವಚನಕಾರರಸಂಖ್ಯೆ ಹೆಚ್ಚಾಗಿ ಕಾಣಬರಲು ಕಾರಣಆಗಿದೆ. ಮತ್ತು ಆರ್.ನರಸಿಂಹಾಚಾರ್ಯರು ಶತಕ ಬರೆದವರನ್ನು. ಸ್ತೋತ್ರ ಬರೆದವರನ್ನು ಕೊನೆಯಲ್ಲಿ ಒಂದು ಅಂಕಿತ ಇಟ್ಟುಕೊಂಡವರನ್ನು ವಚನಕಾರರೆಂದೇ ಪರಿಗಣಿಸಿದ್ದಾರೆ. ಅಲ್ಲದೆ ಕೆಲವರು ವಚನಕಾರರ ಕಾಲದಲ್ಲಿ ಉಂಟಾಗಿ ವೀರಶೈವ ಆಂದೋಲನದಲ್ಲಿ ಭಾಗವಹಿಸಿದ್ದರೆ ಅವರು ವಚನ ಬರೆದಿರಬೇಕು ಎಂದು ಊಹಿಸುತ್ತಾರೆ. ಈ ಥರ ಎಲ್. ಬಸವರಾಜೂ ಅವರೂ ಭಾವಿಸಿದ್ದಾರೆ. ಇನ್ನೂ ಮುಂದೆಹೋಗಿ ಆತನ ಆರಾಧ್ಯ ಧೈವ ಸೋಮನಾಥ ಎಂದಿದ್ದಾರೆ. ಅಂಕಿತದಲ್ಲಿ ವಚನ ಬರೆದಿರಬಹುದೆಂದು ಮಾತಾಡಿದ್ದಾರೆ. ವಚನಗಳು ದೊರೆಯದಿರುವುದರಿಂದ ಅವು ಲಭ್ಯವಾಗುವವರೆಗೆ ಈ ಹೇಳಿಕೆಗಳನ್ನು ಊಹೆಯ ನೆಲೆಯಲ್ಲಿಯೇ ಬಿಡಬಹುದು.

ವಚನಕಾರರ ಆಂದೋಲನಕ್ಕೆ ಖಚಿತ ಸ್ವರೂಪಬಂದದ್ದು ಬಸವಣ್ಣ ಕಲ್ಯಾಣದಲ್ಲಿ ಭಂಡಾರಿಯಾಗಿ ನೆಲೆಸಿದ ಮೇಲೆ. ಅಲ್ಲಿಯವರೆಗೆ ದೇವರ, ಜೇಡರ ದಾಸಿಮಯ್ಯ, ಸಕಲೇಶಮಾದರಸ ಇತ್ಯಾದಿಗಳವರು ಅಲ್ಲಲ್ಲಿ ಸಾಮಾಜಿಕ ಸ್ಥಾನಮಾನಗಳಿಗೆ ಏಕವಾಗಿ ಕೈಹಾಕುತ್ತಿದ್ದ ಚಟುವಟಿಕೆಗಳು ಗೋಚರ ಆದವು. ಈ ವೈಯಕ್ತಿಕ ಪ್ರತಿಭಟನೆಗೆ ಬೆಂಬಲ ಸಾಮೂಹಿಕವಾಗಿ ವೇದಿಕೆ ಕಲ್ಪಿಸಿದ್ದು ಬಸವಣ್ಣನ ಮಹಮನೆಯಲ್ಲಿ ನಡೆಯುತ್ತಿದ್ದ ಅನುಭಾವ ಗೋಷ್ಠಿಗಳು. ರಕ್ಕಸ ಬೊಮ್ಮಯ್ಯ, ತಳವಾರ ಕಾಮಿದೇವನಂತಹವರು ಈ ಅನುಭಾವ ಗೋಷ್ಠಿಗಳ ಪ್ರಚಾರ ಕಾರ್ಯಗಳಿಂದಾಗಿ ತಾವು ಮಾತನಾಡುವ, ದೇವರನ್ನು ನೇರವಾಗಿ ಪೂಜಿಸುವ ಹಕ್ಕು ಪಡೆದರು. ಕಳ್ಳ ಎಂದು ಜನಮೂದಲೆಗೆ ಪಾತ್ರನಾಗಿದ್ದ ರಕ್ಕಸ ಬೊಮ್ಮಯ್ಯ ಆ ಕಸುಬನ್ನು ಬಿಟ್ಟು ಸದ್ಗುಣಿಯಾಗಿ ಶರಣರ ಗೋಷ್ಠಿಯಲ್ಲಿ ಭಾಗವಹಿಸಿ ಮನುಷ್ಯ ಎನ್ನಿಸಿಕೊಂಡ. ತಳವಾರನಾಗಿದ್ದುಕೊಂಡು ಎಲ್ಲ ವರ್ಗದವರ, ವರ್ಣದವರ ಅವಹೇಳನಕ್ಕೆ ಪಾತ್ರನಾಗಿದ್ದ ತಳವಾರ ಕಾಮಿದೇವನೂ ವಚನ ಬರೆದ.

ಕಾಲವಂಚಕನಾಗಿ ಜಂಗಮಕ್ಕಿಕ್ಕಿದಡೆ ಕರ್ಮವೆ ತಂಬುದು.
ಉಪಚರಿಸಿಕೊಂಬನಾಗಿ ತ್ರಿಸಂಧಿಯ ಶಿವಪೂಜೆ ಮಾಡಿದಡೆ,

ಅದು ಹುಸಿವಿಲ್ಲದ ಗ್ರಾಸ. ಅಪಮಾಕ್ಷನ ಮುಟ್ಟದು.
ಇದು ಹುಸಿಯುಲ್ಲವೆಂದೆ ಕಾಮಹರಪ್ರಿಯ ರಾಮನಾಥ.[10]

ವಚನಕಾರರ ಗೋಷ್ಠಿ, ಭಾಷೆ ಬರದವನಿಗೂ ವಚನ ಬರೆಯುವುದನ್ನು ಕಲಿಸಿತು. ಆತಕೂಡ ಅನುಭಾವ, ಆಧ್ಯಾತ್ಮ ವಿಚಾರಗಳಲ್ಲಿ ಆಲೋಚನೆಮಾಡಿ ಭಾಗವಹಿಸಲು ಅವಕಾಶ ದೊರೆಯಿತು. ಬಾಚಿಕಾಯಕದ ಬಸಪ್ಪನ ಹೆಂಡತಿ ಕಾಳವ್ವೆ ತನ್ನ ಗಂಡನ ಕಾಯಕವನ್ನೆ ಪರಿಭಾವಿಸಿ ವಚನ ಬರೆದಳು.

ಕೈತಪ್ಪಿ ಕೆತ್ತಲು ಕಾಲಿಂಗೆ ಮೂಲ
ಮಾತು ತಪ್ಪಿನುಡಿಯಲು ಬಾಯಿಂಗೆಮೂಲ
ವ್ರತಹೀನನ ನೆರೆಯಲು ನರಕಕ್ಕೆ ಮೂಲ
ಕರ್ಮಹರ ಕಾಳೇಶ್ವರ.

ತಮ್ಮ ತಮ್ಮ ಕಾಯಕದ ಸಂಗತಿಗಳನ್ನೇ ವಚನಗಳಲ್ಲಿ ಉದಾಹರಣೆ ಯಾಗಿ, ದೃಷ್ಟಾಂತವಾಗಿ ಕೊಟ್ಟು ಮಾತಾಡುವ ಆಲೋಚಿಸುವ ಕಾರ್ಯವನ್ನು ವಚನಕಾರರ ಆಂದೋಳನ ತಂದಿತು. ಇದುವರೆಗೆ ಉಪಾಸನೆ, ಅರ್ಚನೆಗಳು ಇತರರಿಗೆ ದೊರೆಯದಂತೆಮಾಡಿ ಅವರನ್ನು ದೂರ ಇರಿಸಿತ್ತು. ಅಂತಹವರ ಧರ್ಮದೀಕ್ಷೆ ಹೊಂದಿ ಸಂಸ್ಕಾರ ಪಡೆದು ಸ್ಥಾನಮಾನಗಳಿಸಿಕೊಂಡರು. ಮನುಷ್ಯ ಎಂದು ತಲೆಯೆತ್ತಿ ನಡೆದರು.

ಜೇಡರ ದಾಸಿಮಯ್ಯ ವಚನ ಬರೆಯಲು ಪ್ರೇರಣೆಯಾವುದು ? ವಚನದು ರೂಪ ಹೇಗೆ ಆರಂಭಗೊಂಡಿತು. ಬಸವ, ಅಲ್ಲಮ, ಅಕ್ಕ, ಸಿದ್ಧರಾಮ, ಮುಕ್ತಾಯಕ್ಕ, ಅಜಗಣ್ಣ ಇತ್ಯಾದಿ ಶರಣರು ಬೇರೆ ಬೇರೆ ನೆಲೆಯವರು. ಇವರು ಪರಸ್ಪರ ಸಂಧಿಸಿದಾಗ ವಚನಗಳಲ್ಲಿ ಉತ್ತರ ಪ್ರತ್ಯುತ್ತರ ಕೊಡುತ್ತಾರೆ. ಯಾರ ಪ್ರಭಾವ ಯಾರಮೇಲೆ ಆಗಿದೆ. ಇಷ್ಟಲಿಂಗದ ಉಪಾಸನೆ ಹೇಗೆ ಬಳ ಕೆಗೆ ಬಂತು. ಸ್ಥಾವರಲಿಂಗ ಕೈಯ ಇಷ್ಟಲಿಂಗವಾಗಿ ಬೇರೆ ರೂಪ ಪಡೆದು ಪ್ರಚಲಿತಕ್ಕೆ ಬಂದದ್ದು ಯಾವಾಗ ? ಇದಕ್ಕೆ ಯಾರು ಕಾರ ಣರು ? ಅಲ್ಲಮನಿಗೆ ನಿಜವಾಗಿಯೂ ಅನಿಮಿಷಯ್ಯ ಗುರುವೆ ? ಅನಿಮಿಷಯ್ಯ ನಿಂದ ಅಲ್ಲಮ ಇಷ್ಟಲಿಂಗ ಪಡೆದನೆ ? ಬಸವ, ಅಕ್ಕಮಹಾದೇವಿಯವರಿಗೆ ದೀಕ್ಷಾಗುರು ಯಾರು ? ಹರಿಹರ ಹೇಳುವಪ್ರಕಾರ ಬಸವಣ್ಣನಿಗೆ ನಂದಿ ಮುಖ

ದಿಂದ ಲಿಂಗದೀಕ್ಷೆಯ ಅರ್ಥವೇನು ? ತನಗೆ ತಾನೇ ಗುರುವಾಗಿ ದೇವಾಲಯದಲ್ಲಿ ನಂದಿಸಮ್ಮುಖದಲ್ಲಿ ಲಿಂಗ ಅಳವಡಿಸಿಕೊಂಡನೆ ? ಅಲ್ಲಮನಿಗೆ ಅನಿಮಿಷಯ್ಯನ ಮುಖಾಂತರ ಬಂದ ಲಿಂಗದ ಘಟನೆ ತನಗೆ ತಾನೇ ಗುರುವಾಗಿ ಅಲ್ಲಮನು ಲಿಂಗಪೂಜೆಗೆ ತೊಡಗಿದನೆ ? ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಪರಿಸರದಲ್ಲಿ ಕೆಲವಾರು ವ್ಯಕ್ತಿಗಳಲ್ಲಿ ಶಿವೋಪಾಸನೆ, ಶಿವಭಕ್ತಿ ಬೆಳೆದು ಬಂದುದನ್ನು ಗುರುತಿಸಬಹುದು. ಬಸವಣ್ಣ ವಚನಕಾರನಿದ್ದಂತೆ ಇನ್ನೊಂದೆಡೆ ಅಲ್ಲಮನೂ, ಸಿದ್ಧರಾಮನೂ ವಚನಕಾರರಿದ್ದರು. ಅಲ್ಲಮ ಸಂಧಿಸುವ ಹೊತ್ತಿಗಾಗಲೆ ಅಜಗಣ್ಣ ವಚನಗಳನ್ನು ಹೇಳಿದವನಾಗಿ ಗತಿಸಿದ್ದರೆ. ಮುಕ್ತಾಯಕ್ಕ ವಚನಗಳಲ್ಲಿ ಅಲ್ಲಮನನ್ನು ಮಾತನಾಡಿಸುತ್ತಾಳೆ. ಇದೇ ಥರದ ಬೆಳವಣಿಗೆ ತಮಿಳು ಪುರಾತನರಲ್ಲಿ ಕಾಣುತ್ತೇವೆ. ಕೆಲವರು ತೇವಾರಂಗಳನ್ನು ಹಾಡುವುದು ಇತರ ಶರಣರ ಜೊತೆ ಅನುಭಾವ ಮಾಡುವುದು, ಪರಧರ್ಮೀಯರನ್ನು ವಾದದಲ್ಲಿ ಸೋಲಿಸುವುದು ಇತ್ಯಾದಿ ಚಟುವಟಿಕೆಗಳನ್ನು ಅಲ್ಲಿ ಕಾಣುತ್ತೇವೆ.

ಬಸವಣ್ಣನ ಮಹಮನೆಯಲ್ಲಿ ಅನುಭಾವ ಗೋಷ್ಠಿ ಆರಂಭಗೊಂಡಮೇಲೆ ಶರಣರ ಸಮಾವೇಶ ಸಂಘಟನೆ, ಬೆಳವಣಿಗೆ ತೀವ್ರವಾಗಿ ಹೆಚ್ಚಿದವು. ಬಸವಣ್ಣನ ಪ್ರಭಾವದಿಂದಾಗಿ ಅನೇಕ ಅನುಭಾವಿಗಳು ವಚನ ಬರೆಯುವುದನ್ನು ಕಲಿತಿದ್ದಾರೆ. ಆದರೆ ಎಲ್ಲ ಶರಣರು ಬಸವಣ್ಣನಿಂದಲೇ ಪ್ರಭಾವಿತರಾಗಿ ವಚನ ಬರೆದರು ಎಂದು ಹೇಳಲು ಬರುವುದಿಲ್ಲ. ಯಾಕೆಂದರೆ ಎಷ್ಟೋ ಶರಣರು ಮಹಮನೆಯ ಗೋಷ್ಠಿಯಲ್ಲಿ ಭಾಗವಹಿಸಿಯೇ ಇಲ್ಲ. ಅಂದು ತಮಿಳುನಾಡಿನಲ್ಲಿ ಹಲವು ವರ್ಣದವರು ಶಿವಧರ್ಮದಡಿಯಲ್ಲಿ ಒಂದಾದಂತೆ ಇಲ್ಲಿಯೂ ವಚನಕಾರರು ಒಂದಾದರು. ಅಲ್ಲಿ ಅವರು ಏಕಕಾಲದಲ್ಲಿ ಅಷ್ಟೊಂದು ಸಂಖ್ಯೆಯಲ್ಲಿ ಉಂಟಾಗಲಿಲ್ಲ. ಆದರೆ ಇಲ್ಲಾದರೋ 30-40 ವರ್ಷಗಳ ಅವಧಿಯಲ್ಲಿ 150 ಕ್ಕೂ ಹೆಚ್ಚು ವಚನಕಾರರು ಉಂಟಾದರು. ವಚನ ಬರೆದವರಷ್ಟೇ ಅನುಭಾವಿಗಳಾಗಬೇಕಿಲ್ಲ. ಮೇಲಿಂದ ಮೇಲೆ ನೀಲಮ್ಮ, ಬಸವಣ್ಣ ಇತ್ಯಾದಿ ವಚನಕಾರರಲ್ಲಿ 196000 ಜಂಗಮರು ಮಹಮನೆಯಲ್ಲಿ ಸೇರುತ್ತಿದ್ದರೆಂಬ ಉಲ್ಲೇಖ ಬರುತ್ತದೆ.[10] ಜಂಗಮರ ಸಂಖ್ಯೆಯೇ ಇಷ್ಟೊಂದಿದ್ದರೆ ಇತರ ಶರಣರ ಸಂಖ್ಯೆ

10. ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ ಮಾಡುವ ಮಾಟವಳಿಯುತ್ತಾ ಬಸವಾ. ಇಂದಿಂಗೆ ಅವರ ಊಟ ಏಳಿಯಿತ್ತು ಬಸವಾ. ಇಂದಿಂಗೆ ಅವರ ಸಂಗವಳಿದು ನಿರಾಲಂಬ ಮೂರ್ತಿಯ ಇರವು ಕಾಣಿಸಿರಯ್ಯ ಬಸವಾ.

ಎಷ್ಟಿರಬೇಕು ? ನಮಗೆ ತಿಳಿಯದು.

ವಚನಕಾರರಲ್ಲಿ ಆಂದೋಲನ ಉಂಟಾದದ್ದು ಧಾರ್ಮಿಕ, ಸಾಮಾಜಿಕ ಹಕ್ಕು ಪಡೆಯುವುದಕ್ಕಾಗಿ. ಮುಖ್ಯ ಉದ್ದೇಶ ಇದಾದರೂ ಸಮಾಜವನ್ನು, ತಮ್ಮನ್ನು ತಿದ್ದುತ್ತ ಬದುಕು ನಡೆಸಿದರು. ಸಮಾಜದಲ್ಲಿ ಇರಬಹುದಾದ ಅನೇಕ ಕುಲಕಸಬಿನವರೆಲ್ಲ ಇಲ್ಲಿ ಇದ್ದಾರೆ. ಸಮಗಾರ ಹರಳಯ್ಯ, ಮಾದಾರ ಚೆನ್ನಯ್ಯ, ಕಂಬಳಿನಾಗಿದೇವ, ಡೋಹರ ಕಕ್ಕಯ್ಯ ಈ ಕೆಲವು ವ್ಯಕ್ತಿಗಳು ಸಮಾಜದ ತೀರ ಕೆಳವರ್ಣದಿಂದ ಬಂದವರು. ಹೊಲೆಯ, ಮಾದರ ಕುಲದವರು ಶತ ಶತಮಾನಗಳಿಂದ ವರ್ಣವ್ಯವಸ್ಥೆಯ ಬಡಿತದಿಂದ ಕಂಗಾಲಾಗಿದ್ದವರು. ಸಮಾಜದಲ್ಲಿ ತಲೆ ಎತ್ತಿ ತಿರುಗುವ ಹಾಗಿಲ್ಲ. ಬೀದಿಯಲ್ಲಿ ನಾಲ್ವರಂತೆ ಓಡಾಡುವಹಾಗಿಲ್ಲ. ತಮ್ಮ ನೆರಳು ಬಿದ್ದರೂ ಹಾದುವರ ಮಡಿಗೆ ಭಂಗ ಬರುತ್ತದೆ. ಎಲ್ಲ ಥರದ ಅಪಮಾನಗಳನ್ನು ಸಹಿಸಿಕೊಂಡು ಬದುಕುತ್ತಿದ್ದವರಿಗೆ ನೀವೂ ಮನುಷ್ಯರು, ನಿಮಗೂ ಸಾಮಾಜಿಕ, ಧಾರ್ಮಿಕ ರಂಗಗಳಲ್ಲಿ ಭಾಗವಹಿಸುವ ಅವಕಾಶವಿದೆ ಎಂದು ಅವಕಾಶ ಮಾಡಿಕೊಟ್ಟ ಬಸವಣ್ಣ, ಅವರ ಪಾಲಿನ ಮಹಾನುಭಾವಿ. ಅವರನ್ನು ಉದ್ಧಾರಮಾಡಿದ ದೇವರೇ ಆಗಿದ್ದಾನೆ. ಇಂತಹ ಸಾಮಾಜಿಕ ಕಾರ್ಯಗಳು ಬಸವಣ್ಣ ಮತ್ತಿತರ ವಚನಕಾರರಿಂದ ಆದುದರಿಂದಲೇ ವಚನಕಾರರ ಅನುಭಾವಕ್ಕೆ ಮಾನವೀಯತೆ ಪ್ರಜ್ಞೆಯೂ ಸೇರಿಕೊಂಡು, ಹಾಲತೊರೆ ಬೆಲ್ಲದಕೆಸರಾಗಿ ವಚನಗಳಲ್ಲಿ, ಬದುಕಿನಲ್ಲಿ ಹರಿದುಬಂತು.

ಬಸವಣ್ಣ ಒಂದೆಡೆ ನಿಂತು ಭಂಡಾರಿಯಾಗಿದ್ದುಕೊಂಡು ಭಕ್ತ ಸಂದೋಹಕ್ಕೆ ಆಶ್ರಯವಾದ. ಹೋಗುವ ಬರುವ ಭಕ್ತರ ಬರವ ಹರಸಿ ಹರಸಿ ಕಾತರಿಸುತ್ತಿದ್ದ. ಜಂಗಮದ, ಭಕ್ತರ ಬರವು ಪ್ರಾಣದ ಆಗುಹೋಗಿನಂತೆ. ಬಸವಣ್ಣನ ಭಕ್ತಿಯಿಂದಾಗಿ ಹಲವು ವರ್ಣದ ಶರಣರು ಬಂದು ಆಶ್ರಯಪಡೆದರು. ಈ ದಿಸೆಯಲ್ಲಿ ಪಾದೋದಕ, ಒಕ್ಕ ಮಿಕ್ಕ ಪ್ರಸಾದಗಳು ಶರಣರ ನಡುವೆ ಬಾಂಧವ್ಯ ಉಂಟುಮಾಡುವ ದಾರಿಗಳಾದವು. ಭಕ್ತ, ಜಂಗಮರು ಯಾರೇ

* ಸಂಗಯ್ಯ ಬಸವನ ರೂಪಿನಲ್ಲಿ ಅಡಗಲು ನೀಲಮ್ಮನ ವಚನಗಳು, 1299 ಸಕಲ ಪುರಾತನ ವಚನಗಳು ನೋಡಿ.

ಇರಲಿ ಅವರ ಪಾದೋದಕವನ್ನು ಪ್ರಸಾದ ಎಂದು ಲಿಂಗಕ್ಕೆ ಕೊಟ್ಟು ಕೊಳ್ಳುವ ಆಚಾರ ಬೆಳೆದು ಬಂತು. ಕ್ರೈಸ್ತರಲ್ಲಿ ಕೂಡ ಒಬ್ಬರು ಕುಡಿದ ಬಟ್ಟಲಲ್ಲಿ ಮತ್ತೊಬ ಕುಡಿಯುತ್ತಾನೆ. ಅದು ಎಂಜಲಲ್ಲ ಏಸುವಿನ ಪ್ರಸಾದ. ಈ ಥರದ ಆಚರಣೆಗಳು ಇತರರಿಗೆ ಇರುಸುಮುರುಸು ತರಬಹುದು. ಆದರೆ ಒಂದು ಧರ್ಮದ ಅನುಯಾಯಿಗಳನ್ನು ಒಂದೆಡೆ ಹತ್ತಿರದ ಸಂಬಂಧ ಬೆಳೆಸಿ, ಸೌಹಾರ್ದ ಉಂಟುಮಾಡುವುದು ಅವರ ಉದ್ದೇಶ ಇರಬೇಕು. ಪಾದೋದಕವನ್ನಾಗಲಿ ಒಬ್ಬರು ಬಿಟ್ಟುದನ್ನು ಮತ್ತೊಬ್ಬರು ಪ್ರಸಾದ ಎಂದು ಸ್ವೀಕರಿಸುವ ಆಚರಣೆಯಾಗಲಿ ಯಾವಾಗ ಪ್ರಚಲಿತಕ್ಕೆ ಬಂದವು ಎಂಬುದು ತಿಳಿಯದು. ಆದರೆ ವಚನಕಾರರ ಕಾಲದಲ್ಲಿ ಈ ಆಚರಣೆಗಳು ಅವುಗಳ ನಿಯಮಗಳು ಮೇಲಿಂದ ಮೇಲೆ ಉಕ್ತವಾಗಿವೆ. ಈ ಆಚರಣೆ ಬೇರೆ ಬೇರೆ ವರ್ಣದವರು ಒಂದೆಡೆಕಲೆತಾಗ ಅವರಲ್ಲಿ ನಾವು ಒಂದು ಧರ್ಮದ ಅನುಯಾಯಿಗಳು ಮಾತ್ರವಲ್ಲ ಕೊಡುವ ತೆಗೆದುಕೊಳ್ಳುವ, ಉಡುವ-ಉಪಚರಿಸುವ ಸ್ನೇಹ-ನಂಟುಗಳನ್ನು ಕೂಡಿಸುವ ಸರಪಳಿಯಾಗಿದ್ದವು ಎಂದು ಊಹಿಸಬಹುದು.

ಅಲ್ಲಮ ದೇಶ ಸುತ್ತಿ ಬಂದು, ಸುತ್ತಿ ಸುತ್ತಿ ಬಂದಡಿಲ್ಲ ಲಕ್ಷ ಗಂಗೆಯ ಮಿಂದಡಿಲ್ಲ ಎಂದು ತೀರ್ಥ ಕ್ಷೇತ್ರಗಳ ಯಾತ್ರೆಯನ್ನು ವ್ಯರ್ಥವೆಂದು ಭಾವಿಸಿದನು. ಈ ಶರಣರಿಗೆ ಸಾಮಾಜಿಕ ಹಿತ ಅಷ್ಟು ಮುಖ್ಯಅಲ್ಲ. ಕೌಟುಂಬಿಕ ವ್ಯವಹಾರಗಳೂ ಅಷ್ಟು ಮುಖ್ಯಅಲ್ಲ. ಅತಿ ವೈರಾಗ್ಯಪರನಾದ ಅಲ್ಲಮನಂತಹ ವ್ಯಕ್ತಿಗಳಿಗೆ ಜಗತ್ತಿನ ವ್ಯವಹಾರಗಳು ಅಷ್ಟು ಮುಖ್ಯ ಅಲ್ಲ. ದೇವರು, ಸಾಕ್ಷಾತ್ಕಾರ, ದೇವರಪೂಜೆ, ಸಾಧನೆಇಷ್ಟೇ ಮುಖ್ಯ. ಇವುಗಳನ್ನು ಮಾಡಲು ಇವರು ಸಿದ್ಧರಾದರು. ಊಟ ಇತ್ಯಾದಿಗಳಿಗೆ ಇವರು ಪರಾವಲಂಬಿಗಳು. ಬಸವಣ್ಣ ಹೀಗಲ್ಲ. ಆತ ಮದುವೆಯಾಗಿದ್ದಾನೆ. ಭಂಡಾರಿಯಾಗಿದ್ದಾನೆ. ಸಂಸಾಗಸಾಗರ ಶಿರದುದ್ದವಾದರೂ, ಬಿಜ್ಜಳನ ಭಂಡಾರ ಬೇಡವಾದರೂ ಕಾಯಕಕ್ಕಾದರೂ ಬೇಕು. ಇದರಿಂದಾಗಿ ಆತ ಲೋಕಹಿತ ಕಾರ್ಯಗಳಲ್ಲಿಯೂ ಮಗ್ನ. ಪರರಿಗೆ ಮಾಡುವ-ನೀಡುವಶಕ್ತಿ ಅವನಲ್ಲಿದೆ. ಆದ್ದರಿಂದ ಯಾವತ್ತೂ ಆತ ಬದುಕಿಗೆ ವಿಮುಖವಾಗುವುದನ್ನು ಇತರರಿಗೆಹೇಳಲಿಲ್ಲ. ಬದುಕಿಗೆ ಮುಖಮಾಡಿ ತಾನು ನಡೆದಂತೆ ಇತರರೂ ಹಾಗೆ ನಡೆಯಬೇಕೆಂಬುದನ್ನು ನಡೆದು ತೋರಿಸಿದ.

ಅಲ್ಲಮನಾದರೋ ಹೀಗಲ್ಲ. ಕೆರೆಯ ಕಟ್ಟಿಸುವ ಒಡ್ಡನ ಪ್ರತಾಪವನೇನೆಂಬೆ ನಯ್ಯ ಎನ್ನುತ್ತಾನೆ.

ಒಳಗೆ ತೊಳೆದು ಜಲವ ತುಂಬಲರಿಯದ
ಅರೆಮರುಳ ನೇನಾದ ಹೇಳಿರೇ ?
ಜಲದ ಸಂಗವ ತೊರೆಯಲರಿಯದ
ಜಲವ ಬಯಸುವ ನೆಂತಿದ್ದಹ ಹೇಳಿರೇ ?
ನೆಲನ ಶೋಧಿಸಿ ನೆಲೆಯನರಿಯದೆ
ಕೆರೆಯ ಕಟ್ಟಿಸುವ ಒಡ್ಡ ರಾಮಯ್ಯನ ಇರವೆಂತು ಹೇಳಿರೇ
ನಮ್ಮ ಗುಹೇಶ್ವರನ ನಿಲವನರಿಯದ ಮರುಳು
ಸಿದ್ಧರಾಮಯ್ಯನೆಂತಿದ್ದಹ ಹೇಳಿರೇ ?

ಅಲ್ಲಮನಿಗೆ ಆಧ್ಯಾತ್ಮ ಮುಖ್ಯ. ಸಮಾಜಕಾರ್ಯಗಳು ಅಷ್ಟು ಮುಖ್ಯ ಅಲ್ಲ. ಸರ್ವಜೀವಗಳಲ್ಲಿ ದಯಾಪಾರಿಯಾದ ಶಿವನಿರುವನೆಂದು ತಿಳಿದು ಸಿದ್ಧರಾಮ ಸಮಾಜೋಪಯೋಗಿ ಕಾರ್ಯ ಕೈಗೊಂಡರೆ ಅಲ್ಲಮ ಅದನ್ನು ತಿರಸ್ಕರಿಸುತ್ತಾನೆ. ಮಾಡುವನನ್ನು ಜರೆಯುತ್ತಾನೆ. ಸಿದ್ಧರಾಮನಿಗೆ ಹೀಗೆ ಬೋಧಿಸಿದಂತೆ ಮತ್ತೊಬ್ಬನಿಗೆ "ತನುವ ತೋಂಟವ ಮಾಡಿ ಮನವಗುದ್ದಲಿ ಮಾಡಿ ಅಗೆದು ಕಳೆದೆನಯ್ಯ ಭ್ರಾಂತಿನ ಬೇರ ಎನ್ನುತ್ತಾನೆ." ಹೊರಗೆ ತೋಟ ಮಾಡುವುದಕ್ಕಿಂತ ಒಳಗೆ ತೋಟಮಾಡುವುದನ್ನು ಕಲಿ, ಎಂದು ಬೋಧಿಸುತ್ತಾನೆ. ಆಧ್ಯಾತ್ಮ ಬೋಧಿಸಿದ. ಸರಿಯೇ. ಎಲ್ಲರೂ ಇವನ ಹಾಗೆ ಒಳಗೆ ಕೆರೆ, ತೋಟ ಮಾಡಿದರೆ ಸಮಾಜಕ್ಕಿರಲಿ ಇವರಿಗೆಯೇ ಬದುಕಲು ಆಗುತ್ತದೆಯೋ ? ಸಮಾಜ ಹಿತಕಾರ್ಯಗಳನ್ನೇ ಅಲ್ಲಗಳೆಯುವ ಈ ಧೋರಣೆಗಳಿಂದ ವ್ಯವಸ್ಥಿತ ಸಮಾಜ ರಚನೆಯಾಗುತ್ತದೆಂಬುದು ದೂರದಮಾತು. ವ್ಯವಹಾರ, ಸಮಾಜ, ವ್ಯವಸ್ಥೆಯ ಅಧ್ಯಯನವೇ ಇಲ್ಲದೆ ಕೇವಲ ಧಾರ್ಮಿಕವಾಗಿ ಆಂದೋಲನ ತಂದರೆ ಅದಕ್ಕೆ ಸಂಬಂಧಿಯಾದ ಸಾಮಾಜಿಕ ಮುಖದಲ್ಲಿ ಇವರ ಆಂದೋಲನ ಅಷ್ಟು ಯಶಸ್ವಿ ಅಲ್ಲ. ವ್ಯವಸ್ಥೆಯ ವೈಪರೀತ್ಯಗಳನ್ನು ಗಮನಿಸಿದ ವ್ಯಕ್ತಿಗಳಿಂದ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ಎಲ್ಲಿ ಸಿಗುತ್ತದೆ ? ಧಾರ್ಮಿಕ ಆಂದೋಲನದ ನಾಯಕರಿಗೆ ಧರ್ಮ, ಆಧ್ಯಾತ್ಮ ಅಷ್ಟೇ ಮುಖ್ಯ. ಈ ದಿಸೆ

ಯಲ್ಲಿ ಬೇರೆ ಮುಖಗಳಲ್ಲಿ ತಾನೇ ತಾನಾಗಿ ಸುಧಾರಣೆ ಆದರೆ ಆಗಲಿ ಅಷ್ಟೆ ಮೋಕ್ಷದ ದಾರಿಯಲ್ಲಿ ಪ್ರಾಸಂಗಿಕವಾಗಿ ಸುಧಾರಣೆ ಆದರೆ ಆಗಬಹುದು. ಇವರ ಗುರಿ ದೇವರನ್ನು ಸೇರುವುದು. ದೇವರು ಮೆಚ್ಚಬೇಕಾದರೆ ಇಲ್ಲಿ ಸಲ್ಲುವ ನಾಣ್ಯ ಆಗಬೇಕು. ವಚನಕಾರರ ಆಂದೋಲನಕ್ಕೆ ಹೀಗೆ ಸಾಮಾಜಿಕ ಮಿತಿ ಇರುವುದರಿಂದ ಅವರ ಆಂದೋಲನ ಅಷ್ಟರ ಮಟ್ಟಿಗೆ ಧರ್ಮ ಸಂಬಂಧಿ ಯಾದದ್ದು.

ವಚನಕಾರರ ಆಂದೋಲನ ಧರ್ಮ ಸಂಬಂಧಿಯಾದುದು ನಿಜ. ಆದರೆ ಶತ ಶತಮಾನದಿಂದ ವೈದಿಕ, ಜೈನ ಇತ್ಯಾದಿ ಧರ್ಮ ಮತ್ತು ವ್ಯವಸ್ಥೆ ಗಳಿಂದಾಗಿ ಸ್ತ್ರೀಯರಿಗೆ ಸಾಮಾಜಿಕ, ಧಾರ್ಮಿಕ ಪರಿಸರದಲ್ಲಿ ಅವಕಾಶಗಳು ದೊರೆತಿರಲಿಲ್ಲ. ಆಕೆಯನ್ನು ಆ ಕ್ಷೇತ್ರದಿಂದ ಅಸ್ಪೃಶ್ಯಳನ್ನಾಗಿ ಮಾಡಿಟ್ಟಿದ್ದವು. ವಚನಕಾರರಾದರೋ ಸ್ತ್ರೀಯನ್ನು ಮಾಯೆಯೆನ್ನದೆ ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ ಎನ್ನುತ್ತ, ತಾಯಿ ಎನ್ನುತ್ತ ಪುರುಷನಿಗೆ ಸಮಾನಳು ಎನ್ನುತ್ತ ಅದರಂತೆ ಆಕೆಗೂ ಮಾತಾಡುವ ಭಾಗವಹಿಸುವ ಅವಕಾಶ ಕಲ್ಪಿಸಿದರು. ಲಕ್ಕಮ್ಮ ಸ್ತ್ರೀಯಾದರೂ ಗಂಡನಿಗೆ ಕಾಯಕದ ಬಗ್ಗೆ ಬುದ್ಧಿ ಹೇಳುತ್ತಾಳೆ. ಮುಕ್ತಾಯಕ್ಕ ಹೆಂಗಸಾದರೂ ಅಲ್ಲಮನಂತಹ ಮಹಾಯೋಗಿಗೂ ಅವನ ತಪ್ಪು ತೋರಿಸುತ್ತಾಳೆ. ಅಕ್ಕನಂತಹ ವ್ಯಕ್ತಿ ಎಲ್ಲ ಕಟ್ಟು ಕಟ್ಟಳೆಯನ್ನು ಮೀರಿ ಮಹಾಶರಣೆ ಆಗುತ್ತಾಳೆ. ಅನುಭಾವ ಗೋಷ್ಠಿಯಲ್ಲಿ ನಾಲ್ವರಂತೆ ನಿಂತು ಮಾತನಾಡುತ್ತಾಳೆ. ಗೊಗ್ಗವ್ವೆ, ಕೊಟ್ಟಣದ ಸೋಮವ್ವೆ, ಬುದ್ಧಯ್ಯನ ಹೆಂಡತಿ ಕಾಳವ್ವೆ, ರೆಮ್ಮವ್ವೆ, ಕಾಳ ಕೂಟಯ್ಯನ ಪತ್ನಿ ರೇಚವ್ವೆ, ಕದಿರ ಕಾಯಕದ ರೆಮ್ಮವ್ವೆ ಇತ್ಯಾದಿ ಅನೇಕ ಸ್ತ್ರೀಯರು ಶಿವಶರಣೆಯರಾಗಿ ವಚನಗಳನ್ನು ಬರೆದರು. ಸಮಾಜದ ದೃಷ್ಟಿಯಲ್ಲಿ ಈ ಕೆಲವರು ತೀರ ನಿರ್ಲಕ್ಷ್ಯರು. ಆದರೆ ವಚನಕಾರರು, ಜ್ಯೋತಿ ಸಣ್ಣದಾದರೂ ಕುಡಿ ಹಚ್ಚಿಸಿ ಬೆಳಗಿಸಿದರು.

ಎಚ್ಚೆತ್ತ ಸಮಾಜದಲ್ಲಿ ಹೊಸ ಧೋರಣೆಗಳು ವ್ಯಕ್ತ ಆಗುತ್ತವೆ ನಿಜ. ಆದರೆ ಅದನ್ನು ಅರಿತು ಮನ್ನಣೆ ನೀಡಿ ಬೆಳೆಸುವ, ಆ ಧೋರಣೆಗಳಿಗೆ ವ್ಯವಸ್ಥಿತ ರೂಪ ಕೊಡುವ ಪ್ರೇರಣೆಯೊಂದು ಬೆಂಬಲವಾಗಿರಬೇಕು. ಈ ಕಾಯಕ

ಕಾರಣವಾಗಿ ಬರುವ ಕುಲ ಕುಲವಲ್ಲ. ಜೀವನಕ್ಕೆ ಒಂದು ಮಾರ್ಗ ಎಂದು ಹೇಳಿದರು. ಡೋಹರ ಕಕ್ಕನ ಒಕ್ಕ ಮಿಕ್ಕಪ್ರಸಾದ ಬಸವಣ್ಣ ಸ್ವೀಕರಿಸಲು ತಂದಿದ್ದುದನ್ನು ಅಕ್ಕ ನಾಗಮ್ಮ ತೆಗೆದುಕೊಂಡುದರಿಂದ ಚೆನ್ನಬಸವಣ್ಣನ ಜನನವಾಯಿತೆಂದು ಕಥೆ ಇದೆ. ಈ ಕಥೆ ಜಾತಿಯಿಂದ ಅಂತ್ಯಜನಾದರೂ ಆತ ಕೂಡ ಗೌರವ ಭಾಜನ ಎಂದು ಸಾಧಿಸುವುದು ಇದರ ಉದ್ದೇಶವಾಗಿದೆ. ಅಲ್ಲದೆ ಬಸವಣ್ಣ ಮತ್ತೆ ಡೋಹಗಕಕ್ಕಯ್ಯನ ಮನೆಯ ಸೇವಕ ಮಾದರ ಚನ್ನಯ್ಯನ ಮನೆಯ ತೊತ್ತು ಬೆರಣಿಯನಾಯುವಲ್ಲಿ ಸಂಗಮಾಡಿದಾಗ ನಾನು ಹುಟ್ಟಿದೆ ಎಂದು ಬಸವಣ್ಣ ಹೇಳಿಕೊಂಡಿದ್ದಾನೆ. ತಾನು ಹಾರುವರ ಮನೆಯವನಾದರೂ ಡೋಹರಕಕ್ಕ, ಮಾದರ ಚೆನ್ನರ ಮನೆಯ ತೊತ್ತಿನ ಅಂಶೀಭೂತವೆಂದು ಹೇಳುತ್ತಾನೆ. ಕುಲಗಳಿಂದಾಗಿ ಸಮಾಜ ಅಲ್ಲಗಳೆಯುವುದನ್ನು ತಪ್ಪಿಸುವುದು ಅವನ ಉದ್ದೇಶ. ಯಾಕೆಂದರೆ ಉತ್ತಮ ಕುಲದಲ್ಲಿ ಹುಟ್ಟಿದವನೆಂದು ಜನ ಮನ್ನಣೆ ಕೊಡುತ್ತಿದ್ದರೆ ನಾನು ಅಂತ್ಯಜರ ಮನೆಯಲ್ಲಿ ಹುಟ್ಟಿದೆನೆಂದು ತನ್ನ ಮುಖಾಂತರ ಅವರಿಗೆ ಮನ್ನಣೆ, ಗೌರವ ತಂದುಕೊಡಲು ಬಸವಣ್ಣ ಪ್ರಯತ್ನಿಸಿದ್ದಾನೆ. ಕಂಬಳಿನಾಗಿದೇವನ ಮನೆಯಲ್ಲಿ ಪ್ರಸಾದ ತೆಗೆದುಕೊಳ್ಳುವುದು, ಹರಳಯ್ಯ ಮಧುವರಸರ ಮಕ್ಕಳ ನಡುವೆ (ಸಮಗಾರ ಗಂಡು–ಬ್ರಾಹ್ಮಣ ಹೆಣ್ಣು) ವಿವಾಹ ಸಂಬಂಧ ಬೆಳೆಸುವುದು ನಡೆಯಿತು. ಜಾತಿವರ್ಣಗಳನ್ನು ಕಾಪಾಡಿಕೊಂಡು ಬರುವ ರಾಜಪ್ರಭುತ್ವ ಇದಕ್ಕೆ ಅಡ್ಡಗಾಲು ಹಾಕಿತು. ಕ್ರೂರ ದೌರ್ಜನ್ಯನಡೆಸಿತು. ವ್ಯವಸ್ಥೆಯ ಪಟ್ಟ ಭದ್ರ ಹಿಡಿತದಿಂದಾಗಿ ಪ್ರಗತಿಪರ ಸುಧಾರಣೆಗಳು ಬೆಳವಣಿಗೆ ಕಾಣದಾದವು. ಭಾರತದ ಇತಿಹಾಸದಲ್ಲಿಯೇ ಮೊದಲ ಬಾರಿಗೆ ಬಸವಣ್ಣ ಇಂತಹ ದಿಟ್ಟ ಹೆಜ್ಜೆ ಇಟ್ಟು ಆಂದೋಲನದಿಂದ ಸುಧಾರಣೆ ತರುವ ನೇತಾರನಾದ. ಅಲ್ಲಮಪ್ರಭು ಈ ಮುಂಚೆ ಮೇಲುವರ್ಣದ ಹೆಣ್ಣನ್ನು ಮದುವೆಯಾಗಿ ಕೃತಿತಃ ವರ್ಣವ್ಯವಸ್ಥೆಯನ್ನು ದಾಟಿದ್ದ.

ವಚನಕಾರರಲ್ಲಿ ವಿಚಾರಸ್ವಾತಂತ್ರ್ಯ ಸ್ತ್ರೀ–ಪುರುಷರಿಗೆ ಸಮಾನವಾಗಿ ಬಂದುದನ್ನು ನಾವು ಕಾಣಬಹುದು. ಅದಕ್ಕೆ ಮುಂಚೆ ಸ್ತ್ರೀ, ಪುರುಷನೊಂದಿಗೆ ನಿಂತು ಧಾರ್ಮಿಕ, ಸಾಮಾಜಿಕ ಕ್ಷೇತ್ರಗಳಲ್ಲಿ ಮಾತಾಡುವುದಿರಲಿ, ಅವುಗಳ ಬಗೆಗೆ ತಿಳಿವಳಿಕೆಯಾಗಲಿ, ಪ್ರವೇಶಿಸಿ ಪರಿಚಯ ಮಾಡಿ ಕೊಳ್ಳುವ ವಾತಾವರ

ಣವಾಗಲಿ ಇರಲಿಲ್ಲ. ಸ್ತ್ರೀಯನ್ನು ಸಹ ಶೂದ್ರಳೆಂದು ದೂರವಿಟ್ಟು ವರ್ಣ ವ್ಯವಸ್ಥೆ ಭದ್ರಪಡಿಸಿದ ವಾತಾವರಣದಲ್ಲಿ ಸಮಾನತೆ ಎಲ್ಲಿ ದೊರೆಯುತ್ತದೆ? ಅಲ್ಲಮನಂತಹ ಸಿದ್ಧ ಪುರುಷನನ್ನೇ ಮುಕ್ತಾಯಕ್ಕನೆಂಬ ಶಿವಶರಣೆ ಅವನ ತಪ್ಪು ತೋರಿಸಿಕೊಡುತ್ತಾಳೆ, ತಿದ್ದುತ್ತಾಳೆ.

ನುಡಿಯ ಹಂಗಿನ್ನೂ ನಿನಗೆ ಹಿಂಗದು.
ನಡೆಯನೆಂತು ಪರರಿಗೆ ಹೇಳುವಿರಿ ?
ಒಡಲ ಹಂಗಿನ ಸುಳುಹು ಬಿಡದು
ಎನ್ನೊಡನೆ ಮತ್ತೇತರ ಅನುಭವವಣ್ಣ ?
ತಾನಾದಲ್ಲದೆ ಇದಿರಿಂಗೆ ಹೇಳಬಹುದೆ ?
ಅರಿವ ತೋರಬಲ್ಲಡೆ ತನ್ನನರುಹದೆ
ಅರಿವನು ಕಾಣಾ ಎನ್ನ ಅಜಗಣ್ಣ ತಂದೆ. (ಶಿವರಣೆಯರ ವಚನಗಳು ; ಮುಕ್ತಾಯಕ್ಕನ ವಚನಗಳು. 108.)

ಬಸವಣ್ಣ ಒಂದು ಕಡೆ ಲೋಕದ ಡೊಂಕ ನೀವೇಕೆ ತಿದ್ದುವಿರಿ. ನಿಮ್ಮ ನಿಮ್ಮ ಸಂತೈಸಿಕೊಳ್ಳಿ ಎಂದ. ಇಲ್ಲಿ ಮುಕ್ತಾಯಕ್ಕ ಅದೇ ಧೋರಣೆಯಲ್ಲಿ ಒಂದು ಹೆಜ್ಜೆ ಮುಂದೆ ಹೋಗಿ ನಿನ್ನ ಮಾತಿನ ಹಂಗು ಇನ್ನೂ ತುಂಬಿದೆ. ಹೀಗಿದ್ದು ಬೇರೆಯವರನೆಂತು ತಿದ್ದುವೆ ಎನ್ನುತ್ತಾಳೆ. ವಚನಕಾರರ ಆಂದೋಲನ ಸ್ತ್ರೀ ಕೂಡ ಆಧ್ಯಾತ್ಮ, ಧಾರ್ಮಿಕ, ಸಾಮಾಜಿಕ ಕ್ಷೇತ್ರದಲ್ಲೂ ಆಲೋಚನೆ ಮಾಡುವ ಸ್ವಾತಂತ್ರ್ಯ ನೀಡಿತು. ಪುರುಷನನ್ನು ತಿದ್ದುವ ಹಿರಿಮೆ ಸ್ತ್ರೀಯರದು. ಇದು ವಚನಕಾರರಿಗೆ ಸಲ್ಲತಕ್ಕದ್ದಾಗಿದೆ.

ಬೊಂತಾದೇವಿ ಎಂಬ ಶಿವಶರಣೆ ಕುಲ, ಶೀಲಗಳ ಬಗ್ಗೆ ಮಾತನಾಡುತ್ತಾಳೆ. ಇದಕ್ಕೆ ಒಂದು ಚಂದ ಉದಾಹರಣೆ ಕೊಟ್ಟು ಸ್ಪಷ್ಟಪಡಿಸುತ್ತಾಳೆ. ಊರ ಬಯಲು ಊರ ಒಳಗಣ ಬಯಲು ಎಂದು ಉಂಟೆ ?

ಊರೊಳಗೆ ಬ್ರಾಹ್ಮಣ ಬಯಲು ಊರ ಹೊರಗೆ ಹೊಲೆ ಬಯಲೆಂದುಂಟೆ?

. . . ಎಲ್ಲಿನೋಡಿದಡೆ ಕರೆದಡೆ ಓ ಎಂಬಾತನೆ ಬಿಡಾಡಿ.

(ಶಿ. ಶ. ವ., ಬೊಂತಾದೇವಿಯ ವಚನಗಳು 183,

ಬಯಲು ಒಂದೇ ಹೇಗೋ ಹಾಗೆ ಮನುಷ್ಯರು ಒಬ್ಬರೇ ಎಂದು ಮಾತನಾ

ಡುವ ಆಲೋಚನಾ ಕ್ರಮವನ್ನು ಇಲ್ಲಿ ಗುರುತಿಸಬಹುದು. ಹಾಗೆಯೇ ಸತ್ಯಕ್ಕ ಅರ್ಜನೆ, ಪೂಜನೆಗಿಂತ ಪರಧನ – ಪರಸ್ತ್ರೀಗೆ ಅಳುಪದೆ ಸಚ್ಚಾರಿತ್ರ ಇದ್ದವನ ಬದುಕೇ ನೇಮದಿಂದ ಕೂಡಿದ್ದು ಎಂದು ತಿಳುಹುತ್ತಾಳೆ. ಸ್ತ್ರೀಯರು ಕೂಡ ಮನುಷ್ಯನ ನೈತಿಕ ಬದುಕಿನ ಬಗ್ಗೆ ಮಾತನಾಡುತ್ತಾರೆ. ಆಧ್ಯಾತ್ಮದ ದಾರಿಯ ಬಗ್ಗೆ ಮಾತನಾಡುತ್ತಾರೆ. ಧರ್ಮ ಪ್ರಗತಿಯಾಗುವುದರ ಬಗ್ಗೆ ಮಾತನಾಡುತ್ತಾರೆ. ಸುಧಾರಣೆಯ ಮಾತು ಆಡುತ್ತಾರೆ. ಮೇಲಾಗಿ ಬದುಕುತ್ತಾರೆ. ಅನೇಕ ವಚನಕಾರ್ತಿಯರು ಅಲ್ಲಮನಂತೆ ಬೆಡಗಿನ ವಚನ ಗಳನ್ನು ಬರೆದಿದ್ದಾರೆ. ಅವರು ಬರೆದ ಬೆಡಗಿನ ವಚನಗಳು ಶ್ರೇಷ್ಠ ಸಾಹಿತ್ಯವೇ ಅಲ್ಲವೆ ? ಎಂಬುದು ನಂತರದ ಮಾತು. ಮುಖ್ಯ, ಸ್ತ್ರೀಯರು ಅಕ್ಷರ ಮಾಧ್ಯಮ ಪ್ರವೇಶಿಸಿದ್ದಾರೆ. ಆಲೋಚಿಸುತ್ತಾರೆ. ಬದುಕು ಎಂಥದ್ದಿರ ಬೇಕೆಂಬುದರ ಬಗ್ಗೆ ಚರ್ಚಿಸುತ್ತಾರೆ. ಅನುಮಾನಿಸುತ್ತಾರೆ. ವಚನಕಾರರ ಆಂದೋಲನದಿಂದಾಗಿ 38 ವಚನಕಾರ್ತಿಯರು ಆಗಿ ಹೋಗಿದ್ದಾರೆ. ಇವತ್ತು ಪುರುಷನೊಂದಿಗೆ ಸ್ತ್ರೀ ಸಮಾನತೆಗಾಗಿ ಹೋರಾಡುವುದನ್ನು ಘೋಷಣೆ ಗಳನ್ನೂ ಕೇಳುತ್ತೇವೆ. ಆದರೆ ವಚನಕಾರರ ಕಾಲದಲ್ಲಿ ಹೀಗೆ ಘೋಷಣೆ ಹಾಕುವ ಮುನ್ನವೇ ವಾಕ್‌ಸ್ವಾತಂತ್ರ್ಯ,ಸಾಮಾಜಿಕ, ಧಾರ್ಮಿಕ ಸ್ವಾತಂತ್ರ್ಯ ಗಳನ್ನು ವಚನಕಾರರು ನೀಡಿದ್ದರು. ಮಾನ್ಯಮಾಡಿದ್ದರು.

ಸ್ತ್ರೀಯರಿಗೆ ಸಾಂಸ್ಕೃತಿಕ ರಂಗದಲ್ಲಿ ಸಮಾನ ಅವಕಾಶ ದೊರೆತುದರಲ್ಲಿ ಮುಕ್ತಾಯಕ್ಕ, ಅಕ್ಕಮಹಾದೇವಿ, ಅಕ್ಕನಾಗಮ್ಮ, ಆಯ್ದಕ್ಕಿ ಮಾರಯ್ಯಗಳ ಸ್ತ್ರೀ ಲಕ್ಕಮ್ಮ ಇವರುಗಳದು ಪ್ರಮುಖ ಹೆಜ್ಜೆ. ಒಬ್ಬ ಪುರುಷ ಬದುಕಿನಲ್ಲಿ ದಾಟಬಹುದಾದ ಎಲ್ಲ ಸ್ತರಗಳಿಗೆ ಇವರು ದಾಟಿದ್ದರು. ಎಲ್ಲವನ್ನು ತೊರೆದು ಮದುವೆಯಾಗಿದ್ದ ಗಂಡನನ್ನು ತೊರೆದು ಚೆನ್ನಮಲ್ಲಿಕಾರ್ಜುನನಿಗಾಗಿ ಹಂಬಲಿಸುತ್ತ ಸಮಾಜಕ್ಕೆ ಸೊಪ್ಪು ಹಾಕದೆ ದಿಟ್ಟ ಹೆಜ್ಜೆ ಇಟ್ಟ ಮಹಾ ಶರಣೆ ಅಕ್ಕ ಮಹಾದೇವಿಯನ್ನು ವಚನಕಾರರು ಮನ್ನಿಸಿ, ಗುರುತಿಸಿ, ಗೌರವಿಸಿದರು. ದೊಡ್ಡ ವ್ಯಕ್ತಿತ್ವ ಇದ್ದವರನ್ನು ಗುರುತಿರುವ ವ್ಯಕ್ತಿಗಳೂ ಬೇಕು. ಇಡೀ ಸಮಾಜವೇ ಅಕ್ಕನನ್ನು ಮರುಳು ಎಂದು ದೂರುತ್ತಿದ್ದ ಕಾಲದಲ್ಲಿ ವಚನ ಕಾರರು ಮಹಾಶರಣೆ ಎಂದು ಆಕೆಯನ್ನು ಗೌರವಿಸಿದರು.

ಮಹಮನೆಯಲ್ಲಿ ನಡೆಯುತ್ತಿದ್ದ ಅನುಭಾವಗೋಷ್ಠಿಗೆ ಹೋಗಿ

ಬರುವ ಅಸಂಖ್ಯ ಶರಣ-ಶರಣೆಯರಿಗೆ ಆದರಿಸುವ, ಉಪಚರಿಸುವ ಹೊಣೆಯನ್ನು ಅಕ್ಕನಾಗಮ್ಮ, ನೀಲಲೋಚನೆ, ಗಂಗಮ್ಮ, ಹಡಪದಪ್ಪಣ್ಣಗಳ ಪತ್ನಿ, ಮೋಳಿಗೆ ಮಹಾದೇವಯ್ಯನ ಪತ್ನಿ ಇತ್ಯಾದಿಗಳವರು ಹೊತ್ತು ಆಂದೋಲನಕಾರರಿಗೆ ಬೆಂಬಲ ನೀಡಿದರು. ಸಮಗ್ರವಾಗಿ ತೊಡಗಿದ ಆಂದೋಲನದಲ್ಲಿ ಪುರುಷ–ಸ್ತ್ರೀ ಎನ್ನದೆ ಎಲ್ಲರೂ ತೊಡಗಿದ್ದು ವಚನಕಾರರ ಕಾಲದಲ್ಲಿ. ಆಂದೋಲನ ಕೇವಲ ಪುರುಷರುಗಳ ನಡುವೆ ನಡೆಯುವುದರ ಜೊತೆಗೆ ಸ್ತ್ರೀಯರನ್ನು ತಮ್ಮ ಜೊತೆಗೆ ತೆಗೆದುಕೊಂಡು ತೊಡಗಿದುದು ಗಮನಾರ್ಹ ಬೆಳವಣಿಗೆ. ಉಳಿದ ಯಾವುದೇ ಧಾರ್ಮಿಕ ಆಂದೋಲನಗಳ ಕಾಲದಲ್ಲಿ ನಾವು ಈ ಬೆಳವಣಿಗೆಯನ್ನು ಕಾಣುವುದಿಲ್ಲ. ಕೇವಲ ಪುರುಷರಿಗೆ ಸಂಬಂಧಿಯಾದಂತೆ ಬ್ರಹ್ಮಸಮಾಜ, ರಾಮಕೃಷ್ಣ ಸಂಸ್ಥೆಗಳು ಸ್ಥಾಪಿತವಾದುದೇ ವಿನಾ ಸ್ತ್ರೀಯರಿಗೂ ಧಾರ್ಮಿಕ ವಲಯದಲ್ಲಿ ತೊಡಗುವಂತೆ ಮಠಗಳಲ್ಲಿ ಪ್ರವೇಶಾಕಾಶ ದೊರೆಯಲಿಲ್ಲ. ಅವರು ಗುರುಗಳಾಗಲಿಲ್ಲ. ಅಲ್ಲದೆ ಸ್ತ್ರೀಯನ್ನು ಮಾಯೆ ಎಂದು ಬೋಧಿಸುವುದನ್ನು ಅಲ್ಲಿ ಕಾಣುತ್ತೇವೆ. ಪ್ರಾಟೆಸ್ಟೆಂಟ್ ಪಂಥದಲ್ಲಿ ಕೂಡ ಹಾಗೆಯೇ. ಇವತ್ತು ಅಲ್ಲಿ ಸ್ತ್ರೀಕೂಡ ಭಾಗವಹಿಸುವ ಅವಕಾಶವಿದೆ. ಆದರೆ ಆಕೆ ಧರ್ಮಗುರುವಾಗುವಂತಿಲ್ಲ. ಬುದ್ಧ ಮೊದಲು ಒಪ್ಪದಿದ್ದರೂ ನಂತರ ಸ್ತ್ರೀಯರಿಗೂ ಧಾರ್ಮಿಕ ರಂಗದಲ್ಲಿ ಪ್ರವೇಶಿಸುವ ಅವಕಾಶ ನೀಡಿದ. ಆದರೆ ಅಲ್ಲೆಲ್ಲ ಸ್ತ್ರೀಯರು ಅನುಯಾಯಿಗಳಾಗಿ ಭಾಗವಹಿಸಿದರೇ ವಿನಾ ವಚನಕಾರ್ತಿಯರಂತೆ ಆಂದೋಲನದಲ್ಲಿ ದುಮುಕಲಿಲ್ಲ. ಆಲೋಚನೆಮಾಡಲಿಲ್ಲ. ಸ್ವತಂತ್ರವಾಗಿ ಮಾತನಾಡುವುದನ್ನು ಕಲಿಯಲಿಲ್ಲ. ವಚನ ಕಾರ್ತಿಯರಲ್ಲಿ ಇದೆಲ್ಲ ಉಂಟಾಗಿ ವಚನನಗಳು ಅವರಿಂದ ರಚನೆಯಾದವು.

38 ವಚನಕಾರ್ತಿಯರ ವಚನಗಳು ಸದ್ಯ ನಮಗೆದೊರೆತಿವೆ. ನಮಗೆ ತಿಳಿಯದ ಇನ್ನೆಷ್ಟು ವಚನಕಾರ್ತಿಯರು ಆಗಿ ಹೋಗಿದ್ದಾರೆಯೋ ? ಅಲ್ಲದೆ ಅಂದು ಭಾಗವಹಿಸಿದ ಸ್ತ್ರೀ ಸಮೂಹದ ಸಂಖ್ಯೆ ಎಷ್ಟಿತ್ತೊ ನಮಗೆ ತಿಳಿಯದು ಅಂತೂ ವಚನಕಾರರ ಆಂದೋಲನದಲ್ಲಿ ವಚನಕಾರ್ತಿಯರೂ ಪುರುಷನಿಗೆ ಸಮಾನವಾಗಿ ನಡೆದು ನುಡಿದುದು ಈ ಆಂದೋಲನದ ಹೆಗ್ಗಳಿಕೆಯಾಗಿದೆ. ಪ್ರಪಂಚದಲ್ಲಿಯೇ ಮಹತ್ವದ ಕ್ರಾಂತಿ ಎಂದು ಕರೆಯಿಸಿಕೊಳ್ಳುವ ರಷಿಯದ 1917ರ ಕ್ರಾಂತಿಯಲ್ಲಿ ಈ ಪ್ರಮಾಣದಲ್ಲಿ ಸ್ತ್ರೀಯರು ಭಾಗವಹಿಸಲು ವಾತಾ

ವರಣ ಏರ್ಪಟ್ಟಿರಲಿಲ್ಲವೆಂಬುದು ವಚನಕಾರರ ಆಂದೋಲನದ ಮಹತ್ವವನ್ನು ಸ್ಥಾಪಿಸುತ್ತದೆ.

ವಚನಕಾರರ ನಾಯಕರಾದ ಬಸವಣ್ಣ ಅಲ್ಲಮನಿಂದ ಹಿಡಿದು ಎಲ್ಲ ವಚನಕಾರರೂ ಕಾಯಕದ ಮಹತ್ವವನ್ನು ಪ್ರಸ್ತಾಪಿಸಿದ್ದಾರೆ. ಕಾಯಕದ ಅಗತ್ಯ ಒತ್ತಿ ಹೇಳಿದ್ದಾರೆ. ಹೊಲೆ ಹೊಲೆಯರ ಮನೆಯ ಹೊಕ್ಕಾದಡೆಯೂ ಕೈಕೂಲಿಯಮಾಡಿ ನಿಮ್ಮ ನಿಲುವಿಗೆ ಕುದಿವೆನಲ್ಲದೆ ಎಸ್ಕೊಂಡಲವಸರಕ್ಕೆ ಕುದಿದೆನಾದರೆ ತಲೆದಂಡ ಎಂದು ಬಸವಣ್ಣ ನಡೆದುಕೊಂಡಿದ್ದಾನೆ. ಬಿಜ್ಜಳನ ಗದ್ದುಗೆಯ ಕೆಳಗೆ ಕುಳ್ಳಿರ್ದು ಓಲೈಸುವನೆಂದು ಪರಸೇವೆ ಮಾಡುವನೆಂದು ಜನ ಆಡಿಕೊಂಡರೆ ಅದು ಗುರುಲಿಂಗಜಂಗಮಸೇವೆ ಮಾಡಲು ಕೈಕೊಂಡಿರುವ ಕಾಯಕವೆಂದು ಸ್ಪಷ್ಟಪಡಿಸಿದ್ದಾನೆ. ಬಸವಣ್ಣನಿಗೆ ಹಣ ಅಧಿಕಾರ ಯಾವತ್ತು ಮುಖ್ಯ ಆಗಲಿಲ್ಲ. ತಪ್ಪಿಯೂ ಆತ ರಾಜಕೀಯ ಕ್ಷೇತ್ರದಲ್ಲಿ ರಾಜನಾಗುವ ರಾಜ್ಯಕಟ್ಟುವ ಆಶೆಯನ್ನು ವ್ಯಕ್ತಪಡಿಸಲಿಲ್ಲ. ಶರಣರ ಸೇವೆಮಾಡಲು ಹಣ ಬೇಕು. ಅದಕ್ಕಾಗಿ ಬಿಜ್ಜಳನಲ್ಲಿ ಕಾಯಕಮಾಡಿದ. ಬಸವಣ್ಣನ ಕಣ್ಣ ಮುಂದೆಯೇ ಬಿಜ್ಜಳ ಚಾಲುಕ್ಯರಿಂದ ರಾಜ್ಯಾಪಹರಣ ನಡೆಸಿದ್ದರೂ ತಾನು ಆ ಅಧಿಕಾರದತ್ತ ಅಂತಹ ಬೆಳವಣಿಗೆಯತ್ತ ಹಾತೊರೆಯಲಿಲ್ಲ. ತಾನು ಭಂಡಾರಿಯಾಗುವ ಕಾಲಕ್ಕೆ ಮುಂಚೆ ಅಪಾರವಾಗಿ ಹಣ ದುರ್ವ್ಯಯ ಆದರೂ ಬಿಜ್ಜಳನ ಭಂಡಾರವೆನಗೇಕಯ್ಯ ಎಂದು ಪ್ರಾಮಾಣಿಕವಾಗಿ ಹೇಳಿಕೊಂಡಿದ್ದಾನೆ. ಈತ ರಾಜಕೀಯ ಕ್ಷೇತ್ರವನ್ನು ರಾಜ್ಯ ಹೊಂದುವುದರ ಮೂಲಕ ತೊಡಗಗಿದ್ದದು ಆಂದೋಲನಕ್ಕೆ ಅನೇಕ ಕಾರಣವಾಗಿ ಮಿತಿಹಾಕಿತು. ಒಂದು ಪಕ್ಷ ಬಿಜ್ಜಳನಿಂದ ಹರಳಯ್ಯ ಮಧುವಯ್ಯರ ಶಿರಚ್ಛೇದನ ನಡೆಯದಿದ್ದರೆ, ಬಿಜ್ಜಳ ಹತನಾಗದಿದ್ದರೆ ಬಸವಣ್ಣನ ಸಾಮಾಜಿಕ, ಧಾರ್ಮಿಕ ಆಂದೋಲನ ವ್ಯವಸ್ಥಿತವಾಗಿ ಸಂಘಟನೆಗೊಂಡು ಬೆಳೆಯುತ್ತಿತ್ತು ಎಂಬುದರಲ್ಲಿ ಅನುಮಾನವೇ ಇಲ್ಲ.

. ವಚನಗಕಾರರ ಆಂದೋಲನ ಕೆಳಗಿನಿಂದಲೇ ಆರಂಭವಾಯಿತು ಮಾತ್ರವಲ್ಲ ಅವರಿಂದಲೇ ಮುಂದುವರಿಯಿತು. ಈ ಎಚ್ಚೆತ್ತ ಪ್ರಜ್ಞೆಯ ಚಟುವಟಿಕೆಯ ಸಸಿಗೆ ಬಸವ, ಅಲ್ಲಮನಂತಹವರು ನೀರೆರೆದು ಬೇಲಿ ಹಾಕಿ ಪೋಷಿಸಿದರು. ವಚನಕಾರರಲ್ಲಿ ಕಾಯಕದಿಂದ ಗಳಿಸಿದ ಹಣದ ಬಳಕೆಯಲ್ಲಿಯೂ

ಒಂದು ವ್ಯವಸ್ಥೆ ಇದೆ. ಅಷ್ಟೇ ಅಲ್ಲ ಹೆಚ್ಚು ಸಂಗ್ರಹಕೂಡದು. ಅಗತ್ಯ ವಿದ್ದಷ್ಟುಮಾತ್ರ ಹಣಸಾಕು. ಹೊನ್ನಿನೊಳಗೊಂದೊರೆ ಕೂಡ ತನಗಾಗಿ ತನ್ನ ಮಡದಿ ಮಕ್ಕಳಿಗಾಗಿ ಸಂಗ್ರಹಿಸ ಕೂಡದು. ಇದು ಇವರ ವ್ರತ. ಬಡತನ ನಿವಾರಿಸಲು ಆರ್ಥಿಕ ಉಬ್ಬರ ಸರಿಪಡಿಸಲು ಹಾಕಿ ಕೊಂಡ ವ್ಯವಸ್ಥೆ ಇದು. ಬಸವಣ್ಣ ಮೋಳಿಗೆ ಮಾರಯ್ಯನಮನೆಯಲ್ಲಿ ಚಿನ್ನದ ಕಟ್ಟಿಗೆ ಇಟ್ಟನೆಂಬ ಕಥೆಯಾಗಲಿ ಆದನ್ನು ಆತ ಹಿಂದುರಿಗಿಸಿದುದಾಗಲಿ ಹಣಸಂಗ್ರಹದ ನಿರೋಧವನ್ನೇ ಹೇಳುತ್ತದೆ. ಹಣಕ್ಕೆ ಆಶೆ ಮಾಡುವುದಾಗಲಿ ದೇಹ ಶ್ರಮವಿ ಲ್ಲದೆ ಬೇರೆ ದಾರಿಯಿಂದ ಬರುವ ಹಣವನ್ನು ಕನಿಕರ ಅಥವಾ ದಾಕ್ಷಿಣ್ಯದಿಂದ ಕೊಡುವ ಸ್ವೀಕರಿಸುವ ಎರಡು ಪ್ರವೃತ್ತಿಗಳನ್ನು ಈ ಕಥೆ ವಿರೋಧಿಸುತ್ತದೆ. ಜೇಡರದಾಸಿಮಯ್ಯ ತವನಿಧಿ ಪಡೆದು ಶಂಕರದಾಸಿಮಯ್ಯ ಬಡವನೆಂದು ಊಟಕ್ಕೆ ಗತಿಯಿಲ್ಲವೆಂದು ಧಾನ್ಯ ಕೊಟ್ಟು ಬರಲು ಹೋದಾಗ ಆತ ಹಿಂದಿರುಗಿ ಸಿದ್ದು ಕೇವಲ ಅಹಂಕಾರ ನಿರಸನ ಗೊಳಿಸಿದುದನ್ನು ಮಾತ್ರ ಹೇಳುವುದಿಲ್ಲ. ದುಡಿಯುವ ಬಲ ನಿನಗೂಇದ್ದಂತೆ ನನಗೂ ಇದೆ. ಬೇರೆದಾರಿಯ ಹಣ ಮತ್ತು ಸಂಗ್ರಹ ನನಗೆ ಬೇಡ ಎಂಬುದನ್ನು ಅದು ಹೇಳುತ್ತದೆ. ಬಸವಣ್ಣ ನಂತೂ ಬಡ ಶರಣರ ಬಗ್ಗೆ ಅಪಾರ ಮರುಕಪಟ್ಟು ಕೊಡಲು ಹೋಗಿದ್ದಾನೆ. ಆದರೆ ಆತನ ಅನುಯಾಯಿಗಳೇ ಆ ನಿಯಮವನ್ನು ಉಲ್ಲಂಘಿಸಲಿಲ್ಲ. ಪೋಷಿ ಸಿದರು. ಲಕ್ಕಮ್ಮ ತನ್ನ ಗಂಡ ಮಾರಯ್ಯನಿಗೆ ಹೇಳುವುದೂ ಇದನ್ನೇ. ಮನೆ ಬಡವಾದರೇನು ಮನ ಬಡತನವೆ. ದುಡಿಯುವ ಮನೋಧರ್ಮ ಬಲವಾಗಿ ಇದ್ದಾಗ ಬಡತನವೆಲ್ಲಿ ಬಂತು. ಹಣಸಂಗ್ರಹ ಬೇಡವೆಂದೂ ಪರಿವರ್ತನೆ ಮುಖ್ಯ ವೆಂದೂ ನಿಯಮಗಳನ್ನುವ್ಯಕ್ತಿಗೆ ವಿಧಿಗೊಳಿಸಿದರು. ಆತ್ಮ ಪರಿವರ್ತನೆಯಿಂದ ಜಗತ್ತು ಸುಧಾರಣೆ ಆಗಲಾರದು. ಅದು ವ್ಯವಸ್ಥೆಯಾಗಿ ಅಗತ್ಯ, ಅನಿವಾರ್ಯ ವಾದಾಗ ಉಳಿದು ಬೆಳೆಯಲು ಸಾಧ್ಯ. ಈ ಅನಿವಾರ್ಯ ವಚನಕಾರರ ಕಾಲದಲ್ಲಿ ನಿಯಮವಾಗಿರಲಿಲ್ಲ. ವ್ಯಕ್ತಿಯ ಐಚ್ಛಿಕ ವಿಷಯವಾಯಿತು. ಇದರಿಂದಾಗಿ ಶರಣರಾದ ಅನುಯಾಯಿಗಳು ಮೊದಲು ಅದನ್ನು ಸರಿಯಾಗಿಯೇ ಆಚರಿಸಿ ದರು ಎನ್ನಬಹುದು. ಆದರೆ ಅದು ಬೆಳೆಯುವ ವಾತಾವರಣ ಮುಂದೆ ಪೂರ್ಣವಾಗಿ ಇಲ್ಲವಾಯಿತು.

**ಇತರ ಆಂದೋಲನಗಳೊಂದಿಗೆ ಹೋಲಿಕೆ**

ನನ್ನ ಅಧ್ಯಯನದಲ್ಲಿ ಒಟ್ಟು ಐದು ಆಂದೋಲನಗಳಿವೆ. ರಷಿಯದ ಆಂದೋಲನವೊಂದನ್ನು ಬಿಟ್ಟರೆ ಉಳಿದೆಲ್ಲವು ಧಾರ್ಮಿಕ ಆಂದೋಲನಗಳು. ಕೆಲವುಗಳಂತೂ ತೀರ ಮಿತಿಯುಳ್ಳವು. ಒಂದೋ ಎರಡೋ ಸುಧಾರಣೆಯಲ್ಲಿ ಪರ್ಯವಸಾನವಾಗುವ ಉದ್ದೇಶವುಳ್ಳವುಗಳು. ಧಾರ್ಮಿಕ ಆಂದೋಲನವಾಗಿ ಆರಂಭಗೊಂಡುದರಿಂದ ಅವು ಧಾರ್ಮಿಕ ಮಿತಿಯಲ್ಲಿ ಹೆಚ್ಚು ಉಳಿದಿವೆ. ಇವಕ್ಕೆ ಸಾಮಾಜಿಕ ಸಂಬಂಧ ಇರುವುದರಿಂದ ಆ ಕ್ಷೇತ್ರದಲ್ಲೂ ಆಂಶಿಕವಾಗಿ ಅವು ಬೆಳೆದಿವೆ. ಕೆಲವು ಅಂಶಗಳನ್ನು, ಸುಧಾರಣೆಯನ್ನು ಅವು ತಂದಿವೆ. ಧಾರ್ಮಿಕವಾಗಿ ಆರಂಭಗೊಂಡ ಆಂದೋಲನವನ್ನು ರಾಜಕೀಯ ಆರ್ಥಿಕವಾಗಿ ಆರಂಭಗೊಂಡ ಆಂದೋಲನದೊಂದಿಗೆ ಹೋಲಿಸಿ ಅದು ತಂದ ಕ್ರಾಂತಿಯನ್ನು ಇದು ತರಲಿಲ್ಲವೆಂದು ಹೇಳುವುದು ಸುಲಭ. ಆಂದೋಲನಗಳ ಉದ್ದೇಶ, ಸ್ವರೂಪವೇ ಬೇರೆ ಆಗಿರುವುದರಿಂದ ಅದು ತಂದ ಕ್ರಾಂತಿಯನ್ನು ಇದೂ ತರಬೇಕಿತ್ತೆಂದಾಗಲಿ ಇದು ತಂದ ಧಾರ್ಮಿಕ ಆಂದೋಲನವನ್ನು ಅದು ತರಬೇಕಿತ್ತೆಂದಾಗಲಿ ಹೇಳುವುದು ಅಸಮಂಜಸ. ಅನಗತ್ಯ. ಆದರೆ ಧಾರ್ಮಿಕವಾಗಿ ಆರಂಭಗೊಂಡ ಆಂದೋಲನಗಳು ಸಾಮಾಜಿಕ ಪರಿವಲಯದ ಬಗೆಗೂ ಆಲೋಚನೆ ನಡೆಸಿದಾಗ ಅವು ಆ ಕ್ಷೇತ್ರದಲ್ಲಿ ಎಷ್ಟರ ಮಟ್ಟಿಗೆ ಮತ್ತು ಯಾವ ಸ್ವರೂಪದಲ್ಲಿ ಬೆಳವಣಿಗೆಗಳನ್ನು ತಂದಿತು ಎಂದು ಲಕ್ಷಿಸುವುದು ಇಲ್ಲಿ ಪ್ರಸ್ತುತ. ಆರ್ಥಿಕ, ಸಾಮಾಜಿಕ, ರಾಜಕೀಯ ಕಾರಣವಾಗಿ ಉಂಟಾದ ಕ್ರಾಂತಿಗಳು ತರುವ ಬದಲಾವಣೆಗೂ ಧಾರ್ಮಿಕ ಕಾರಣವಾಗಿ ಆಗುವ ಬದಲಾವಣೆಗೂ ವ್ಯತ್ಯಾಸವಿದೆಯಾದರೂ ಅವುಗಳ ಸಫಲತೆ ಅಥವಾ ವಿಫಲತೆಯನ್ನು ಇಲ್ಲಿ ಗುರುತಿಸಿದರೆ ತಪ್ಪಾಗಲಿಕ್ಕಿಲ್ಲ.

ಬುದ್ಧ ಸಾಮಾಜಿಕ ಸಮಸ್ಯೆಗಳ ಬಗೆಗೆ ಅಷ್ಟು ತಲೆಕೆಡಿಸಿಕೊಳ್ಳಲಿಲ್ಲ. ಆತನ ಬಗೆಗೆ ಹುಟ್ಟಿಕೊಂಡಿರುವ ಕೆಲವು ಕಥೆಗಳು ಇದನ್ನು ಸಮರ್ಥಿಸುತ್ತವೆ. ಸ್ವತಃ ತನ್ನ ಸಾಕುತಾಯಿ ಮತ್ತಿತರ ಸ್ತ್ರೀಯರು ಭಿಕ್ಕುಗಳಾಗಲು ಬಂದಾಗ ಸ್ತ್ರೀಯರು ಧಾರ್ಮಿಕ ಪರಿವಲಯದಲ್ಲಿ ಭಾಗವಹಿಸುವುದು ಆತನಿಗೆ ಇಷ್ಟವಿರಲಿಲ್ಲ. ವ್ಯಕ್ತಿಯ ಇಷ್ಟಗಳಿಗೆ ಮಿತಿಗೊಂಡಾಗ ಅದರ ವ್ಯಾಪ್ತಿಯ ಬಗೆಗೆ ಅನುಮಾನ ಬರುತ್ತದೆ. ವೈದಿಕ ಧರ್ಮದ ಎಲ್ಲ ಹುಸಿ ಆಚರಣೆ, ದೇವರುಗಳನ್ನು

ಧಿಕ್ಕರಿಸಿ ತನ್ನದೇ ಆದ ತತ್ವಗಳನ್ನು ಭೋಧಿಸಿದ ನಿಜ. ಆದರೆ ಅದು ಧರ್ಮ ವೊಂದರ ಸಂಸ್ಥಾಪನೆ. ಧಾರ್ಮಿಕವಾದುದು. ಎಲ್ಲ ಜಾತಿಗಳವರಿಗೆ ಇಲ್ಲಿ ಅವಕಾಶ ದೊರೆಯಿತು. ಪ್ರಪಂಚ ನಶ್ವರ ಎಂದು ಹೇಳುವ ಬೋಧಿಸುವ ಸುಧಾರಕರಿಂದ ಯಾವ ಸಮರ್ಪಕ ವಿಶ್ಲೇಷಣೆ ಸಾಧ್ಯ. ಮಾರ್ಕ್ಸ್, ಲೆನಿನ್ ಹೊರತು ಉಳಿದೆಲ್ಲ ಸುಧಾರಕರು ಇದೇ ನುಡಿಯನ್ನು ಪಟ್ಟಿಮಾಡಿದವರೇ. ವಚನಕಾರರು ಸತಿ–ಪತಿಗಳು ಒಂದಾದ ಬದುಕಿಗೆ ವಿರುದ್ಧ ಹೇಳಲಿಲ್ಲ. ಬದುಕನ್ನು ತ್ಯಜಿಸಿ ಎಂದು ಹೇಳಲಿಲ್ಲ. ಅಂತೆಯೇ ಪುರಾತನ ವಚನಕಾರರೂ ಕೂಡ. ಆದರೆ ಬುದ್ಧ ಈ ದಿಸೆಯಲ್ಲಿ ಹೊರತಾಗಿದ್ದಾನೆ. ವಚನಕಾರರಲ್ಲಿ ಅಲ್ಲಮ' ಸಿದ್ಧರಾಮನಂತಹವರೂ ಈ ದಿಕ್ಕಿನವರೇ. ಸಿದ್ಧರಾಮ ಮಾತ್ರ ಸಂಸಾರವನ್ನು ಅಲ್ಲಗಳೆಯದಿದ್ದರೂ ತಾನು ವಿವಾಹವಾಗದೆ ಸಮಾಜಹಿತ ಕಾರ್ಯದಲ್ಲಿ ತೊಡಗಿದ್ದ. ಬೌದ್ಧ ದರ್ಮ, ಮಾರ್ಟಿನ್ ಲೂಥರ್ ಬೆಳೆಸಿದ ಪ್ರಾಟೆಸ್ಟೆಂಟ್ ಪಂಥದಂತೆ ಜಗದ್ವಿಖ್ಯಾತವಾಗಿ ಅನೇಕ ದೇಶಗಳಲ್ಲಿ ಹರಡಿತು. ಅಸಂಖ್ಯ ಅನುಯಾಯಿಗಳನ್ನು ಸಂಪಾದಿಸಿತು. ಈ ವ್ಯಾಪ್ತಿ ಉಳಿದ ಯಾವ ಧಾರ್ಮಿಕ ಆಂದೋಲನಗಳಿಗೂ ಲಭಿಸಲಿಲ್ಲ.

ತಮಿಳು ಪುರಾತನರ ಧೋರಣೆಗಳು ವಚನಕಾರರಲ್ಲಿ ಪ್ರತಿಧ್ವನಿತವಾಗಿವೆ. ಪ್ರಗತಿಪಡೆದಿವೆ. ವಚನಕಾರರು ಯಜ್ಞಯಾಗಗಳ ಜೌಚಿತ್ಯ ಪ್ರಶ್ನಿಸಿ ಆಲೋಚಿಸಿದ್ದಾರೆ. ತಮಿಳುಪುರಾತನರು ಹಾಗೆ ಪ್ರಶ್ನಿಸಲಿಲ್ಲ. ಅದಕ್ಕೆ ಪರಿಸರ, ಹಿನ್ನೆಲೆಯೂ ಕಾರಣ. ಯಜ್ಞಯಾಗಮಾಡುವ ಪರಂಪರೆಯಲ್ಲಿ ಬಂದವರು ಅದನ್ನು ಒಂದು ಸಂಪ್ರದಾಯವಾಗಿ ಆಚರಿಸಿಬಿಡುತ್ತಾರೆ. ಅದು ಉಸಿರಾಡುವಷ್ಟು ಸರಾಗವಾಗಿ ಬಳಕೆಯಲ್ಲಿ ಬಂದುಬಿಡುತ್ತದೆ. ಆದರೆ ಆ ಪರಿವಲಯದ ಹಿನ್ನೆಲೆ ಇಲ್ಲದವರು ಅಂತಹ ಆಚರಣೆಗಳನ್ನು ಆಚರಿಸಬೇಕೆಂದಾಗ ಅದನ್ನು ಯಾಕೆ ಮಾಡಬೇಕು ? ಮಾಡುವುದರಿಂದ ಪ್ರಯೋಜನ ಏನು ? ಮಾಡದಿದ್ದರೆ ಹಾನಿಏನು ? ಇಂತೆಲ್ಲ ಹಲವು ಅನುಮಾನ ಪ್ರಶ್ನೆಗಳಿಗೆ ಎಡೆಮಾಡಿ ಔಚಿತ್ಯವರಿತು ನಿರಾಕರಿಸುತ್ತಾರೆ. ತಮಿಳು ಪುರಾತನರು ಹೇಗೆ ಬೇರೆ ಬೇರೆ ಕುಲದಿಂದ ಬಂದವರೋ ಹಾಗೆಯೇ ವಚನಕಾರರೂ ಕೂಡ. ಅಲ್ಲದೆ ತಮಿಳು ಪುರಾತನರಲ್ಲಿ ಕುಲಸೂಚಕವಾದ ಕಸುಬು ಹೆಸರಿನೊಂದಿಗೆ ನಿರ್ದೇಶಿತವಾದಂತೆ ವಚನಕಾರರಲ್ಲಿಯೂ ಅದು ಉಳಿದಿವೆ. ಇದು ಸ್ಪಷ್ಟವಾಗಿ ಅದರ ಪ್ರಭಾವ

ವನ್ನು ಸೂಚಿಸುತ್ತದೆ. ಕಣಂಬುಲ್ಲ ನಂಬಿ ಎಂದಾಗ ಹೊಡೆಹುಲ್ಲ ಬಂಕಣ್ಣ ಹೆಸರು ನೆನಪಿಗೆ ಬರುತ್ತದೆ. ಅನಾಯನಾಯನಾರ್, ಎರಿಪತ್ತನಾಯನಾರ್ ಇತ್ಯಾದಿ ಹೆಸರುಗಳು ಡೋಹರಕಕ್ಕ, ಮಾದರ ಚೆನ್ನ, ಜೇಡರದಾಸಿಮಯ್ಯ, ಭಂಡಾರಿಬಸವಣ್ಣ, ಸಮಗಾರ ಹರಳಯ್ಯ ಪಡಿಹಾರಿಉತ್ತಯ್ಯ ಇತ್ಯಾದಿ ವೃತ್ತಿ ಸೂಚಕ ಹೆಸರುಗಳನ್ನು ಸ್ಮರಣೆಗೆತರುತ್ತವೆ. ತಮಿಳು ಪುರಾತನರ ಪ್ರಭಾವ ವಚನಕಾರರ ಮೇಲೆ ಇನ್ನು ಅನೇಕವಿಧದಲ್ಲಿ ಆಗಿದೆ. ಏಕದೇವೋಪಾಸನೆ ವಚನಕಾರರಲ್ಲಿ ಮಾಹೇಶ್ವರನಿಷ್ಠೆಯಾಗಿ ಶಿವನೇ ದೈವ, ಶಿವಭಕ್ತನೆ ಕುಲಜ ಎಂದು ಬೆಳೆದು ಬಂದಿದೆ. ಅದೇರೀತಿ ಪರಧರ್ಮೀಯರನ್ನು ಅಲ್ಲಿಗಳೆಯುವುದು, ವಾದದಲ್ಲಿ ಸೋಲಿಸುವುದು, ಆ ದೇವಾಲಯಗಳನ್ನು ನಾಶಮಾಡಿ ದೇವಾಲಯ ಸ್ಥಾಪಿಸುವುದು, ಕೆರೆಕಾಲುವೆ ಕಟ್ಟಿಸುವುದು ತಂಡಿಯಡಿಗಳ ನಾಯನಾರ್, ತಿರುಜ್ಞಾನ ಸಂಬಂಧರ್, ತಿರುವಾವುಕ್ಕರಸರ್ ಇತ್ಯಾದಿಗಳವರಿಂದ ಬಸವಣ್ಣ, ಸಿದ್ಧರಾಮ, ಆದಯ್ಯ, ಜೇಡರದಾಸಿಮಯ್ಯ ಮತ್ತಿತರ ಅನೇಕ ಶರಣರು ಪ್ರಭಾವಿತ ಆಗಿದ್ದಾರೆ.ಶಿವಭಕ್ತರಿಗೆ ದಾಸೋಹಮಾಡುವುದು. ಶಿವನಂತೆ ಕಾಣುವುದು, ಸ್ತೋತ್ರ, ಪೂಜೆ ಇತ್ಯಾದಿಗಳು ಅವರಿಂದ ಸ್ಫೂರ್ತಿ ಪಡೆದವುಗಳೇ ಆಗಿವೆ. ಪುರಾತನರ ಧಾರ್ಮಿಕ ಆಂದೋಲನ ಧಾರ್ಮಿಕ ಪರಿವಲಯಕ್ಕೆ ಮಾತ್ರ ಸೀಮಿತವಾಗಿ ಸಾಮಾಜಿಕ ಪರಿವಲಯಕ್ಕೆ ಹಬ್ಬಿದೆ. ಇವರು ಎಲ್ಲ ಇಹದ ವಲಯಗಳಲ್ಲಿ ಸಂಸಾರದೊಂದಿಗೆ ತೊಡಗಿದವರಾದುದರಿಂದ ಜಗತ್ತು ತ್ಯಾಜ್ಯ ಇತ್ಯಾದಿ ಘೋಷಣೆಗಳು ಅವರಿಂದ ಬರಲಿಲ್ಲ. ಸುಂದರ ನಂಬಿಯಂತಹವರು ಎರಡು ಮದುವೆಯಾದರು. ಇಲ್ಲಿ ಬರುವ ಅಡೆತಡೆಗಳನ್ನು ಎದುರಿಸಿ ಮುಂದುವರಿಯುವುದು ಬಸವಣ್ಣ ಮುಂತಾದವರಿಗೆ ಮಾದರಿಯಾಗಿದೆ. ವಿವಿಧವರ್ಣದವರು ಒಂದೆಡೆ ಸೇರಿದಾಗ ತತ್ವರೂಪಿತಗೊಂಡಾಗ ಕೆಲವು ಸಂದರ್ಭದಲ್ಲಿ ಹೊಂದಿಕೊಂಡು ನಡೆಯಬೇಕಾಗುತ್ತದೆ. ಈ ಹೊಂದಾಣಿಕೆ ಹೊಸ ತತ್ವವೊಂದರ ಅಡಿಯಲ್ಲಿ ಅನಿವಾರ್ಯ ಆಗುತ್ತದೆ.

**ಆಂದೋಲನದ ನೇತಾರರು**

ಆಂದೋಲನವನ್ನು ಮುಖ್ಯವಾಗಿ ರೂಪಿಸುವುದು ವ್ಯವಸ್ಥೆ ಮತ್ತು ಕಾಲ. ನಾಯಕರೇನಿದ್ದರೂ ಆಂದೋಲನ ರೂಪಗೊಳ್ಳುವ ದಿಕ್ಕಿನಲ್ಲಿ ಆನುಷಂಗಿಕ

ವಾಗುವರು. ಚರಿತ್ರೆಯಲ್ಲಿ ಆಂದೋಲನಗಳು ಅನಿವಾರ್ಯವಾದರೆ ನಾಯಕರು ಉಂಟಾಗುವುದು ಕೇವಲ ನಿಮಿತ್ತ ಮಾತ್ರವಾಗಿ. ಆದರೆ ಆಂದೋಲನ ಸರಿಯಾಗಿ ವ್ಯವಸ್ಥೆಗೊಂಡು ಫಲಪ್ರದವಾಗುವ ದಿಸೆಯಲ್ಲಿ ಈ ನಾಯಕ ಬಹು ಮುಖ್ಯ ಪಾತ್ರವಹಿಸುತ್ತಾನೆ. ತತ್ಕಾಲದ ಎಲ್ಲ ವಿದ್ಯಮಾನಗಳನ್ನು ಆತ ಬಲ್ಲವನಾಗಿರಬೇಕು. ರಷಿಯದ ಸಂದರ್ಭದಲ್ಲಿನ ಲೆನಿನ್‌ನನ್ನೇ ತೆಗೆದು ಕೊಳ್ಳಬಹುದು. ಆ ದೇಶದ ಚರಿತ್ರೆಯಲ್ಲಿ ಕ್ರಾಂತಿ ಚರಿತ್ರೆಯ ಅನಿವಾರ್ಯ ಸ್ಫೋಟವಾಗಿತ್ತು. ಲೆನಿನ್ನನಾದರೋ ತನ್ನ ಬಾಲ್ಯದಿಂದಲೇ ವ್ಯವಸ್ಥೆಯ ವಿರುದ್ಧ ಸಿಡಿದು ನಿಲ್ಲುವ ಮನೆತನದಿಂದ ಬಂದವನು. ಝಾರ್ ನಿಕೊಲಸನ ವಿರುದ್ಧ ವ್ಯವಸ್ಥೆಯ ರಾಜಷಾಹಿಯ ವಿರುದ್ಧ ತೊಡಗಿದನೆಂದು ಲೆನಿನ್ನನ ಅಣ್ಣ ಮರಣ ದಂಡನೆ ಪಡೆದ. ಈ ಆಘಾತ ಲೆನಿನ್ನನ ಮೇಲೆ ಬಹಳ ಯೋಚನೆಗೆ ದೂಡಿತು. ಆತ ಎಲ್ಲರೀತಿಯ ಅಧ್ಯಯನ ನಡೆಸಿ ಮಾರ್ಕ್ಸ್‌ನ ತತ್ವಗಳಿಂದ ಪ್ರಭಾವಿತನಾದ. ಮಾರ್ಕ್ಸ್-ಏಂಜಲ್ಸ್‌ರು ರೂಪಿಸಿದ ಕ್ಯಾಪಿಟಲ್ ಕೃತಿ, ನಡೆಯಬೇಕಾದ ದಾರಿಯನ್ನು ಸೂಚಿಸಿತು. ಲಾ ಪದವಿ ಪಡೆದು ತಾನು ತೊಡಗಬಹುದಾದ ಹಾದಿಯ ಬಗ್ಗೆ ಯೋಚಿಸಿ ಕಾರ್ಮಿಕರ ಒಕ್ಕೂಟಕ್ಕೆ ಕರೆ ನೀಡಿದ. ಇಸ್ಕ್ರಾ ಪತ್ರಿಕೆಯ ಮೂಲಕ ತನ್ನ ವಿಚಾರಗಳನ್ನು ಸಂವಹನಮಾಡುತ್ತ ಸಂಘಟನೆಗೆ ತೊಡಗಿದ. ಮೆನ್ಷೆವಿಕ್ ಮತ್ತು ಬೋಲ್ಷೆವಿಕ್ ಎಂದು ಎರಡು ಭಾಗವಾದ ಮಾರ್ಕ್ಸ್‌ನ ಅನುಯಾಯಿಗಳು ಮೊದ ಮೊದಲು ಮೆನ್ಷೆವಿಕರು ಮೇಲುಗೈ ಪಡೆದರು. ರಷಿಯವನ್ನು ಮೊದಲು ವಶಪಡಿಸಿಕೊಡವರು ಇವರೆ. ಬಂಧಿಯಾಗಿದ್ದ ಲೆನಿನ್ ತಪ್ಪಿಸಿಕೊಂಡು ಸ್ವಿಟ್ಸರ್‌ಲೆಂಡ್‌ನಲ್ಲಿದ್ದುಕೊಂಡು ಕಾರ್ಮಿಕರ ಅಧಿಕಾರ ಪಡೆಯುವ ರೀತಿಯನ್ನ ಸಮರ್ಥರೀತಿಯಲ್ಲಿ ತಿಳಿಸುತ್ತಾಬಂದ. ರಾಜಪ್ರಭುತ್ವ ಮತ್ತು ಬಂಡವಾಳಷಾಹಿಗಳ ಕೈಕೆಳಗೆ ದುಡಿದ ಬೂರ್ಶ್ವಾ ವರ್ಗ ಇತಿಹಾಸದುದ್ದಕ್ಕೆ ಶೋಷಣೆ ಪರವಾಗಿದ್ದುದನ್ನು ಲೆನಿನ ಮಾರ್ಕ್ಸ್‌ನಿಂದಾಗಿ ಗಮನಿಸಿದ. ಕಮ್ಯುನಿಸ್ಟ್ ರಾಷ್ಟ್ರ ಸುವ್ಯವಸ್ಥಿತವಾಗಿ ರೂಪುಗೊಳ್ಳಬೇಕಾದ ಕಾಲದಲ್ಲಿ ಅವರನ್ನು ದೇಶದಿಂದ ಹೊರಗಟ್ಟದೆ, ಸೆರೆಮನೆಗೆ ತಳ್ಳದೆ ದೇಶಕಟ್ಟುವ ದಿಸೆಯಲ್ಲಿ ಹೇಗೆ ಬಲವಂತವಾಗಿ ದುಡಿಸಿಕೊಳ್ಳಬೇಕು ಎಂಬುದನ್ನು ಚಾಕಚಾಕ್ಯತೆಯಿಂದ ಪ್ರಯೋಗಕ್ಕೆ ತಂದಿದ್ದಾನೆ. ಅಲ್ಲದೆ ದೇಶಕಟ್ಟುವ ದಿಸೆಯಲ್ಲಿ ಸಂಪೂರ್ಣವಾಗಿ ಬಲಪ್ರಯೋಗ ಕೂಡದೆಂದು ಅವರನ್ನು ಮನ ಒಲಿಸಿಕೊಂಡು ದೇಶ ಕೇವಲ

ಕಾರ್ಮಿಕರದು ಮಾತ್ರವಲ್ಲ, ಪ್ರತಿಯೊಬ್ಬ ಪ್ರಜೆಗಳದೂ ಅಹುದು ಎಂದು ತಿಳಿಸಿ ಅವರ ಮನ ಗೆದ್ದಿದ್ದಾನೆ. ಮಾರ್ಕ್ಸ ತತ್ವಗಳಿಂದ ಮಾತ್ರ ದೇಶದ ಪ್ರಗತಿ ಸಾಧ್ಯ ಎಂಬುದನ್ನು ಕಂಡುಕೊಂಡು ಅದು ತರಬಹುದಾದ ಪ್ರಗತಿಯನ್ನು ಎಲ್ಲ ಜನತೆಗೂ ತಿಳಿಸಿದ್ದಾನೆ.

ಮಾರ್ಕ್ಸ್-ಲೆನಿನ್ನರ ಕ್ರಾಂತಿನೇರ, ಸ್ಪಷ್ಟ. ಅವರ ಅಧ್ಯಯನ, ಯೋಜನೆಗಳು ಎಲ್ಲವೂ ಸಮರ್ಪಕವಾದುದು. ಆದರೆ ಬಸವಣ್ಣ ಮತ್ತಿತರ ಧಾರ್ಮಿಕ ಸುಧಾರಕರದು ಈ ಥರದ್ದಲ್ಲ. ಮಾರ್ಕ್ಸ್, ಲೆನಿನ್ನರು ಸಮಾಜವಾದದ ನೆರವಿನಿಂದ ಸಮಾಜದ ಅಧ್ಯಯನದಿಂದ ಅದರ ಪರಿಹಾರ ಕಂಡುಹಿಡಿದವರು. ಮಾರ್ಕ್ಸ್ ಒಂದುರೀತಿ ಡಾಕ್ಟರನಂತೆ. ರೋಗಿಯ ಚಿಕಿತ್ಸೆ ಇಂಥದೇ ಎಂದು ಪರೀಕ್ಷಿಸಿ ತಕ್ಕ ಔಷಧ ಬರೆದುಕೊಟ್ಟಿದ್ದಾನೆ. ಇಲ್ಲಿ ಊಹೆ, ತರ್ಕ, ಮೋಕ್ಷ ಇತ್ಯಾದಿ ಹಳಸು ಮಾತುಗಳಿಗೆ ಅವಕಾಶವಿಲ್ಲ. ಇದರಿಂದ ಅವರದು ವಾಸ್ತವ ನೆಲೆಗಟ್ಟಿನ ಮೇಲೆ ನಿಂತ ಅಧ್ಯಯನ. ಧಾರ್ಮಿಕ ಸುಧಾರಕರ ಅಧ್ಯಯನ ಹಾಗಲ್ಲ. ಇವರಿಗೆ ಮೋಕ್ಷ ಮುಖ್ಯ. ದೇವರನ್ನು ಸಾಕ್ಷಾತ್ಕರಿಸಿಕೊಳ್ಳುವುದು ಮುಖ್ಯ. ಈ ದಿಸೆಯಲ್ಲಿ ದೇವನನ್ನು ತಲುಪುವ ಹಂತದಲ್ಲಿ ಸಕಲ ಜೀವಾತ್ಮರಿಗೆ ಲೇಸ ಬಯಸಬೇಕು. ಇದು ದೇವನ ಪ್ರೀತ್ಯರ್ಥವೆ. ಯಾರು ಸಮಾಜವನ್ನು ಆದ್ಯಂತ ಅಧ್ಯಯನ ಮಾಡುವುದಿಲ್ಲ, ಸಮಾಜದ ಸಮಸ್ಯೆ ಇಂಥದೇ ಎಂದು ತಿಳಿಯುವುದಿಲ್ಲ ಅಂತಹವರಿಂದ ಸಮರ್ಪಕವಾದ ಪರಿಹಾರ ಸಿಗುವುದು ಸಾಧ್ಯವಿಲ್ಲ. ಬಸವಣ್ಣ, ಲೂಥರ್, ಬುದ್ಧರ, ಸುಧಾರಣೆ ಕೇವಲ ಧಾರ್ಮಿಕ ಪರಿವಲಯದಲ್ಲಿ ಬೆಳೆದು ಇತರೆಡೆಗೆ ಹಬ್ಬಿದ್ದು ಮಾತ್ರವಾಗಿದೆ. ಸಮಾಜ ಮುಖ್ಯವೇ ಅಲ್ಲದವರಿಗೆ ಸಮಾಜದ ಸಮಸ್ಯೆ ಗಮನಕ್ಕೆ ಬರುವುದಾದರೂ ಹೇಗೆ. ಯಾವಾಗ ಧರ್ಮದ ಮಿತಿಯಲ್ಲಿದ್ದುಕೊಂಡು ತನ್ನ ಧರ್ಮದವರನ್ನು ಮಾತ್ರ ಸಂಘಟಿಸುತ್ತ ಆ ಪರಿಧಿಗೆ ಬರದವರನ್ನು ಆಚೆ ಇಟ್ಟು ಪರಿಹಾರ ಕಂಡು ಹಿಡಿದಾಗ ಅದು ಸಮಾಜಕ್ಕೆ ಹೊಂದುವಂಥದಾಗಿರುವುದಿಲ್ಲ ಮಾತ್ರವಲ್ಲ ಆ ಒಂದು ಧಾರ್ಮಿಕ ಪರಿವಲಯಕ್ಕೆ ಕೂಡ ವೈಜ್ಞಾನಿಕವಾದ ಪರಿಹಾರ ಕಂಡುಹಿಡಿದಿರುವುದಿಲ್ಲ.

ಬಸವಣ್ಣ ಮಾಡಿದ ಮತ್ತೊಂದು ತಪ್ಪೆಂದರೆ ಬ್ರಾಹ್ಮಣ ವರ್ಣದವರನ್ನೇ ಮಾಪರಿಯಾಗಿಟ್ಟುಕೊಂಡುದು. ಅವರನ್ನು ಮಾತ್ರ ಇಟ್ಟು ಅವಕ್ಕೊಳುತ್ರ ಮ

ಬದುಕು ಸಾಗಿಸುವ ಜೀವನ ವಿಧಾನವನ್ನು ಆತ ಕಂಡುಕೊಳ್ಳಬೇಕಿತ್ತು. ಬ್ರಾಹ್ಮಣರಲ್ಲಿ ಗೋತ್ರ, ಶಾಸ್ತ್ರವಿಧಿಇದೆ. ಅದನ್ನು ಇಲ್ಲಿಯೂ ತಾ ಎಂದು ಡೋಹರ ಕಕ್ಕಯ್ಯ ಮಾದರ ಚೆನ್ನಯ್ಯನೆಂಬುದು ಗೋತ್ರಎಂದು ಹೇಳ ಹೊರಟ. ಬ್ರಾಹ್ಮಣ ಧರ್ಮಕ್ಕೆ ಪ್ರತಿಸ್ಪರ್ಧಿಯಾಗಿ ಪೈಪೋಟಿ ನಡೆಸಿದನೇ ವಿನಾ ಅದನ್ನು ಅತ್ತ ಸರಿಸಿ ಬೇರೆಯಾಗಿ ಆಲೋಚನೆ ಮಾಡಲಿಲ್ಲ. ಯಾವಾಗ ವ್ಯವಸ್ಥೆಯೊಂದರ ಕಾರ್ಯಾಚರಣೆಯನ್ನು ಅನುಸರಿಸಿ ಮತ್ತೊಂದು ರೂಪಿತ ಆಗುತ್ತದೋ ಅದು ಅಷ್ಟೊಂದು ಸಮರ್ಪಕವಾಗಿರುವುದಿಲ್ಲ ಮಾತ್ರವಲ್ಲ ಮತ್ತೆ ಬೇರೆಯಾದ ವೈಪರೀತ್ಯಗಳಿಗೆ ಹಾದಿ ಮಾಡಿಕೊಡುತ್ತದೆ.

ವಚನಕಾರರಲ್ಲಿ ಅಲ್ಲಮ, ಬಸವಣ್ಣ, ಸಿದ್ಧರಾಮ, ಚೆನ್ನಬಸವಣ್ಣ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ ಇವರು ಒಂದು ರೀತಿಯಲ್ಲಿ ನಾಯಕವರ್ಗ. ಇವರು ಮಾಡಬೇಕಾದ ಕಾರ್ಯಗಳಿಗೆ ಇವರ ಹತ್ತಿರವಿದ್ದು ಗೋಷ್ಠಿಗಳ ಬಗೆಗೆ ಸಲಹೆ ಸೂಚನೆ ಕೊಡುತ್ತಿದ್ದ ಅನುನಾಯಕವರ್ಗದವರು ಒಂದುವಿಭಾಗವಾದರೆ ಉಳಿದೆಲ್ಲ ಅನುಯಾಯಿಗಳು ಮತ್ತೊಂದು ವಿಭಾಗ. ಬಸವಣ್ಣ, ಅಲ್ಲಮ ಇವರು ಬಹುಮಟ್ಟಿಗೆ ನಾಯಕರುಗಳು. ಒಬ್ಬನಲ್ಲಿ ಕರ್ತೃತ್ವ ಶಕ್ತಿ ಇದೆ. ಮತ್ತೊಬ್ಬನಲ್ಲಿ ಅಧಿಕಾರ ಚಲಾಯಿಸುವ ಯಾವ ದಾಕ್ಷಿಣ್ಯಕ್ಕೂ ಎಡೆಕೊಡದೆ ತಿದ್ದುವ ನಿಷ್ಠುರ ಸ್ವಭಾವವಿದೆ. ಮುಂದೆ ತಾವು ತಲುಪಬೇಕಾದ ಕಡೆ ಪರಿಜ್ಞಾನ ಇದೆ. ಹಾಗೆಯೇ ಮಾರ್ಕ್ಸ್, ಲೆನಿನ್ ಇವರುಗಳೂ ಕೂಡ. ಬಸವಣ್ಣನಲ್ಲಿ ತನ್ನಲ್ಲಿಗೆ ಅನೇಕರನ್ನು ಭಕ್ತರನ್ನು-ಶಿಷ್ಯರನ್ನು ಬರಮಾಡಿ ಕೊಳ್ಳುವ ನಿರ್ದೇಶಿಸುವ ಸಾಮರ್ಥ್ಯ ಇತ್ತು. ಅಲ್ಲಮ ಯೋಗ, ಆಧ್ಯಾತ್ಮ ದಲ್ಲಿ ತುರೀಯ ಹಂತ ತಲುಪಿದವನು. ಆದರೆ ಬಸವಣ್ಣನಂತೆ ಸಂಸ್ಥೆ ಕಟ್ಟಿ ಬೆಳೆಸುವ ಪ್ರಚಾರಮಾಡುವ ಶಕ್ತಿ ಅವನಿಗಿದ್ದಿಲ್ಲ. ಅಲ್ಲಮ ವಿಚಾರವಾದಿ. ಭಾರತದ ಉದ್ದಗಲಕ್ಕೂ ಸಂಚಾರ ಮಾಡಿದವನು. ಜನರ ನಡೆ ನುಡಿ ಬಲ್ಲವನು. ಆಗಬೇಕಾದ ಕಾರ್ಯದ ಬಗ್ಗೆ ಪರಿಜ್ಞಾನ ಇದ್ದವನು. ಆದರೆ ಅಲ್ಲಮ ಸಂಪಾದಿಸಿದ್ದ ಯೋಗ ಇತ್ಯಾದಿ ಆಧ್ಯಾತ್ಮ ವಿದ್ಯೆಯನ್ನು ಬಸವಣ್ಣ ಸಾಧಿಸಿಕೊಂಡವನಲ್ಲ.

ಅಲ್ಲಮ, ಬಸವಣ್ಣ ಪ್ರಚಾರಮಾಡಿದ್ದನ್ನು ಅವನ ಅನುಯಾಯಿಗಳು ಉಳಿಸಿ ಬೆಳೆಸಿದರು. ಆದುದರಿಂದ ನಾಯಕನಷ್ಟೆ ಅನು

ನಾಯಕ ವರ್ಗ ಅಷ್ಟೇ ಮುಖ್ಯ. ಅಂತೆಯೇ ಮಾರ್ಕ್ಸ್-ಲೆನಿನ್ನರು ಕೂಡ. ಮಾರ್ಕ್ಸ್ ಕಮ್ಯುನಿಸಂ ತತ್ವದ ಜನಕ. ಅದನ್ನು ಸಮಾಜಕ್ಕೆ ಹೇಗೆ ಅಳವಡಿಸಬೇಕು. ಹೇಗೆ ಕಾರ್ಯಾಚರಣೆಯಲ್ಲಿ ತಂದು ಬೆಳೆಸಬೇಕು ಎಂಬ ವಿಧಾನಗಳ ಬಗ್ಗೆ ವಿಜ್ಞಾನಿಯಂತೆ ಸ್ಪಷ್ಟವಾಗಿ ಬರೆದು ಬಿಟ್ಟು ಹೋದ. ಆತ ಈ ತತ್ವ ಕಂಡುಹಿಡಿಯುವುದಕ್ಕೆ ತನ್ನ ಕಾಲವನ್ನೆಲ್ಲ ಕಳೆಯಬೇಕಾಯಿತು. ಸಮಾಜದ ಉನ್ನತಿ ಬಯಸುವ ಕಮ್ಯುನಿಸಂ ತತ್ವ, ಪ್ರಯೋಗಕ್ಕೆ ತರುವ ಮತ್ತೊಬ್ಬ ನಾಯಕನನ್ನು ಎದುರು ನೋಡುತ್ತಿತ್ತು. ಅಂತೆಯೇ ಆ ಪಾತ್ರವನ್ನು ಲೆನಿನ್ ಮಾಡಿದ. ಕಾರ್ಮಿಕರನ್ನು ತನ್ನ ಮಾತಿನ ಮೋಡಿಯಿಂದ, ಬರಹಗಳಿಂದ ಒಲಿಸಿಕೊಂಡ. ಮಧ್ಯಮವರ್ಗದ ಜನತೆಯನ್ನು ಹೇಗೆ ಉಪಾಯವಾಗಿ ಮಾತ್ರ ಒಲಿಸಿಕೊಳ್ಳಬೇಕು. ಅಧಿಕಾರದಲ್ಲಿದ್ದ ರಾಜಪ್ರಭುತ್ವ, ಬಂಡವಾಳ ಷಾಹಿಗಳನ್ನು ದಯೆ, ದಾಕ್ಷಿಣ್ಯವಿಲ್ಲದೆ ಹೇಗೆ ಬಗ್ಗು ಬಡಿಯಬೇಕು ಮತ್ತು ಕಾರ್ಮಿಕರು ಮತ್ತಿತರ ಸಮಾಜವನ್ನು ಹೇಗೆ ಸಂಘಟಿಸಬೇಕು ಎಂಬುದನ್ನು ಆತ ಕಂಡುಕೊಂಡಿದ್ದ. ಅದಕ್ಕೆ ಅನುಗುಣವಾಗಿ ಎಲ್ಲ ತಂತ್ರಗಳನ್ನು ಆತ ಬೆಳೆಸಿ ಯಶಸ್ವಿಯಾದ. ಬಸವಣ್ಣನಲ್ಲಿಯೂ ಇದೇ ಥರದ ಲಕ್ಷಣ ಕಾಣುತ್ತೇವೆ. ಬಂದಭಕ್ತರಿಗೆ ಬಾಗುತ್ತಾನೆ. ಶರಣ, ಜಂಗಮರನ್ನು ಉಪಚರಿಸಿ ಅವರು ಕೇಳಿದ್ದನ್ನು ಒದಗಿಸುತ್ತಾನೆ. ಬೇರೆ ಏನೇ ಅವಗುಣಗಳಿದ್ದರೂ ಕೊರಳಲ್ಲಿ ಲಿಂಗವಿದ್ದರೆ ಲಾಂಛನವನ್ನು ಕಂಡು ನಂಬುತ್ತಾನೆ. ಕೊನೆಗೆ ಪರಿಸ್ಥಿತಿ ಬಂದಾಗ ಲಾಂಛನಕ್ಕೆ ತಕ್ಕ ಆಚರಣೆಯೂ ಬೇಕುಎಂದು ಕಲಿಸುತ್ತಾನೆ. ಕಲಿಯದಿದ್ದರೆ ಕಠೋರವೂ ಆಗುತ್ತಾನೆ.

ಸಾಮಾನ್ಯವಾಗಿ ನಾಯಕರಾಗುವವರು ಅಷ್ಟು ಶ್ರೀಮಂತರೂ ಅಲ್ಲದ ಬಡವರೂ ಅಲ್ಲದ ಮಧ್ಯಮ ವರ್ಗದಿಂದ ಬಂದವರಾಗಿರುತ್ತಾರೆ. ಇವರಿಗೆ ವಿದ್ಯಾಭ್ಯಾಸ ಪಡೆಯುವ ಅವಕಾಶವಿರುತ್ತದೆ. ಸಮಾಜದ ಎಲ್ಲ ವಲಯಗಳ ಆಗುಹೋಗುಗಳ ಪರಿಚಯ ಇರುತ್ತದೆ. ತಮಗೆ ತಕ್ಕಷ್ಟು ಶ್ರೀಮಂತಿಕೆ ಇರುವುದರಿಂದ ಸಮಾಜದಲ್ಲಿ ಸ್ಥಾನಮಾನ ಪಡೆದಿರುತ್ತಾರೆ. ಅಲ್ಲದೆ ತಮ್ಮ ಎಲ್ಲ ಆಶಯಗಳನ್ನು ಪೂರೈಸಿಕೊಳ್ಳಲಾಗದ ಬಡತನ ಇರುವುದರಿಂದ ಬಡತನ ತರುವ, ಒಡ್ಡುವ ವಿಪತ್ತಿನ ಅನುಭವ ಇರುತ್ತದೆ. ಹೀಗಾಗಿ ವರ್ಣ, ವರ್ಗ ಸಮಾಜವನ್ನು ಎಷ್ಟರಮಟ್ಟಿಗೆ ವಿಭಾಗಮಾಡುವಲ್ಲಿ ಪಾತ್ರವಹಿಸುತ್ತದೆ ಎಂಬು

ದನ್ನು ಬಲ್ಲವರಾಗಿರುತ್ತಾರೆ. ಮಾರ್ಕ್ಸ್, ಲೆನಿನ್ನರು ಕಾರ್ಮಿಕರ ಮಕ್ಕಳು. ಮಾರ್ಟಿನ್ ಲೂಥರ್ ಬಡ ಶ್ರಮಿಕವರ್ಗದ ಮಗನಾದರೆ ಬುದ್ಧ ಒಬ್ಬ ರೈತನ ಮಗ. ತಮಿಳು ಪುರಾತನರು ಕೆಳವರ್ಗದಿಂದ ಬಂದವರು. ಸಮಾಜ ವಿಭಾಗಿ ಸುವ ಕೆಳವರ್ಣದಿಂದಲೂ ಬಂದವರು. ಜಾತಕ ಕಥೆಗಳು ಮತ್ತು ಶಿಲಾ ಪ್ರತಿಮೆಗಳು ಹೇಳುವಂತೆ ಬುದ್ಧ ಚಕ್ರವರ್ತಿಯ ಮಗನಲ್ಲ. ಅವೆಲ್ಲ ಆರಾಧನಾ ಮನೋಭಾವದಿಂದ ಕಟ್ಟದ ಜನಪ್ರಿಯ ಕಥೆಗಳು ಅಷ್ಟೆ. ಬಸವಣ್ಣ ಬ್ರಾಹ್ಮಣವರ್ಣದ ಬಡತನದಲ್ಲಿ ಬೆಳೆದವನಾದರೆ ಅಲ್ಲಮ ಮದ್ದಳೆ ನುಡಿಸುವವರ ನಟುವರ ಕುಲದಲ್ಲಿ ಬಂದವನು. ಇವರೆಲ್ಲರಿಗೂ ಬಡತನ ತರುವ ನೋವುಗಳ ಅನುಭವವಿತ್ತು. ಶ್ರೀಮಂತರು, ಮೇಲ್ವರ್ಣದವರು ಹೇಗೆ ಶೋಷಣೆ ಮಾಡುತ್ತಾರೆ ಮತ್ತು ಯಾವ ಹಾದಿಯಲ್ಲಿ ನಡೆಯುತ್ತಾರೆ ಎಂಬ ಪರಿಜ್ಞಾನ ಇತ್ತು. ಶೋಷಿಸುವ ಜನಗಳ ಹತ್ತಿರವಿದ್ದು ಅವರು ಬಳಸುವ ತಂತ್ರ ಸ್ವಭಾವ, ಲಕ್ಷಣಗಳ ಪರಿಚಯ ಇತ್ತು. ಹೀಗಾಗಿ ತಾವು ಸಾಧಾರಣೆಗೆ ತರ ಹೊರಟಾಗ ಹೀಗೆ ನಡೆಯಬಾರದು, ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ಶೋಷಕ ನಾಯಕರಿಂದ ಕಲಿತು ನಡೆಯುತ್ತಿದ್ದರು. ಬಂಡವಾಳಶಾಹಿಗಳು ಯಾವ ದಾಕ್ಷಿಣ್ಯವೂ ಇಲ್ಲದೆ ಕಠೋರ ಹೃದಯಿಗಳಾಗಿ ಬಡಜನತೆಯ ಹಸಿವಿಗೆ ಗುಂಡಿನ ಥಾಳಿಯ ಉತ್ತರ ಕೊಡುತ್ತಾರೋ ಹಾಗೆ ನಾವು ಕೂಡ ನಾವು ರೂಪಿಸಿ ಕೊಂಡ ತತ್ವಗಳನ್ನು ಅನುಷ್ಠಾನಕ್ಕೆ ತರಬೇಕಾದರೆ ಅದೇ ರೀತಿಯ ಧೋರಣೆ ಗಳನ್ನು ತಳೆಯಬೇಕೆಂದು ಕಲಿತುಕೊಂಡರು. ತಮ್ಮ ಕೆಲಸ ಮಾಡಿಸಿ ಕೊಳ್ಳಲು ಬುದ್ಧಿ ಜೀವಿಗಳನ್ನು ತೃಪ್ತಿಪಡಿಸಿ ಶೋಷಣೆ ಪರ ಅವರು ದುಡಿಸಿ ಕೊಳ್ಳುವುದನ್ನು ಇವರೂ ಕಲಿತರು. ಮತ್ತು ಅಷ್ಟಕ್ಕೆ ನಿಂತರೆ ಪ್ರಗತಿ ಸಾಧ್ಯ ವಿಲ್ಲವೆಂದು ಅದಕ್ಕೂ ಉತ್ತಮ ಸಮಾಜದ ರೂಪಧಾರಣೆಗೆ ಪ್ರಯತ್ನ ಪಡ ಬೇಕೆಂದು ಪ್ರಯತ್ನ ನಡೆಸಿದರು, ಯಶಸ್ವಿಯಾದರು.

ಮಾರ್ಕ್ಸ್–ಲೆನಿನ್ನರ ಮುಂದೆ ಇದ್ದುದು ಕಮ್ಯುನಿಸಂ ಸರ್ಕಾರ ಸ್ಥಾಪನೆ ಮಾಡಬೇಕೆಂದು. ಅದನ್ನು ಅವರು ಎಲ್ಲ ಪ್ರಯತ್ನದಿಂದಲೂ ಅನುಷ್ಠಾನಕ್ಕೆ ತಂದರು. ಮಾರ್ಟಿನ್ ಲೂಥರನಿಗೆ ಹೊಸಧರ್ಮವೊಂದು ಸ್ಥಾಪಿಸುವ ಉದ್ದೇಶ ಇರಲಿಲ್ಲ. ಪಾದ್ರಿ, ಚರ್ಚುಗಳ ಪಾವಿತ್ರ್ಯತ್ವ ಉಳಿಸಿಕೊಂಡು ಕ್ರೈಸ್ತಧರ್ಮದ ಪರಿಚಯ ಸರಿಯಾಗಿ ಮಾಡಿಕೊಡಬೇಕೆಂಬುದು ಅವನ

ಉದ್ದೇಶ. ಆ ದಿಸೆಯಲ್ಲಿ ಆತ ನಡೆದು ಯಶಸ್ವಿಯಾದ. ಬುದ್ಧನಾದರೋ ತನ್ನ ಪ್ರಶ್ನೆಗಳಿಗೆ ವ್ಯಕ್ತಿ ಮೂಲವಾಗಿ ಉತ್ತರ ಕಂಡುಹಿಡಿಯಲು ಹೊಸತತ್ವ ಗಳ ಜನಕನಾಗಿ ಧರ್ಮವೊಂದರ

ಆಂದೋಲನ ಯಶಸ್ವಿಯಾಗುವುದು ತತ್ವಗಳ ಪ್ರಚಾರದಿಂದ. ಬುದ್ಧ ತನ್ನ ತತ್ವಗಳನ್ನು ಪ್ರಚಾರ ಮಾಡುತ್ತಾ ಬೋಧನೆಗಳು ಪ್ರಮುಖ ಪಾತ್ರ ವಹಿಸುವಂತೆ ಮಾಡಿದ. ಮಾರ್ಟಿನ್ ಲೂಥರ್ ಭಾಷಣ ಮಾಡುವುದರ ಮೂಲಕ ಲೇಖನಗಳನ್ನು ಬರೆಯುವುದರ ಮೂಲಕ ಪ್ರಾರ್ಥನಾ ಗೀತೆಗಳನ್ನು ಹಾಡುವುದರ ಮೂಲಕ ತನ್ನ ಉದ್ದೇಶವನ್ನು ಪ್ರಚಾರ ಮಾಡಿದ. ಲೆನಿನ್ ಮತ್ತು ಮಾರ್ಕ್ಸ್‌ರ ಕ್ರಾಂತಿ ಸಾಮಾಜಿಕ ಮುಖದ್ದು. ಅದು ಧರ್ಮವನ್ನು ಬಹಿಷ್ಕರಿಸಿ ಆದ ಕ್ರಾಂತಿ. ಧರ್ಮ ಕೂಡ ಶೋಷಣೆ ಪರ ಎಂಬುದನ್ನು ಅರ್ಥಯಿಸಿಕೊಂಡವರು. ಅವರು ತಮ್ಮ ಪ್ರಣಾಲಿಗಳನ್ನು ಸಂವಹನ ಮಾಡಿದ್ದು ಲೇಖನ ಮತ್ತು ಭಾಷಣಗಳಿಂದ. ವಚನಕಾರರಾದರೂ ಭಾಷಣ ಪ್ರವಚನ ಇಲ್ಲವೆಂದರೂ ಸಲ್ಲುತ್ತದೆ. ವಚನ ಮತ್ತು ನಡೆಯಿಂದ ಜನತೆಯನ್ನು ಸಮಾಜವನ್ನು ತಿದ್ದಿದರು. ತಮ್ಮ ಕಾರ್ಯ ಕ್ಷೇತ್ರದಲ್ಲಿ ವಚನ ಮಾಧ್ಯಮವಾಗಿಸಿ ಕೊಂಡು ಯಶಸ್ಸು ಸಾಧಿಸಿದರು.

## ಕೊನೆಯ ಮಾತುಗಳು

ಸಾಮಾನ್ಯವಾಗಿ ಪಂಥ, ಚಳುವಳಿ, ಆಂದೋಲನಗಳು ಅಸ್ತಿತ್ವಕೆ ಬರುವುದು ಸಾಮಾಜಿಕವಾಗಿ ಸಂಕ್ರಮಣ ಪರಿಸ್ಥಿತಿಯಿದ್ದಾಗ. ಸಮಾಜ, ವ್ಯವಸ್ಥೆ ಹೊಸಧರ್ಮವೊಂದರ ಉಗಮಕ್ಕೆ ಕಾರಣವಾಗುತ್ತ ಅದನ್ನು ಉಂಟುಮಾಡುತ್ತದೆ. ಧರ್ಮ ಅಥವಾ ಕ್ರಾಂತಿ ಉಂಟಾದರೆ ಅದು ಚರಿತ್ರೆಯ ಅನಿವಾರ್ಯ ಆಸ್ಫೋಟನೆ. ಅಗತ್ಯವಾದ ಆವಿರ್ಭಾವ ಆದಾಗಿರುತ್ತದೆ.

ಆಂದೋಲನ ಅಥವಾ ಕ್ರಾಂತಿ ಸಂಭವಿಸುವುದರಿಂದ ಅದರ ಪ್ರಭಾವ ಸಮಾಜದ ಇತರ ವಲಯಗಳಲ್ಲಿಯೂ ಆಗುತ್ತದೆ. ವಚನಕಾರರ ಆಂದೋಲನ ಪರಿಣಾಮವಾಗಿ ಸಾಹಿತ್ಯ ಮತ್ತು ಸಂಸ್ಕೃತಿಯಲ್ಲಿ ಪ್ರಭಾವ ಆಯಿತು. ಸಾಮಾಜಿಕವಾಗಿಯಂತೂ ವರ್ಣ, ವರ್ಗಗಳ ನಡುವೆ ದೊಡ್ಡ ಸಂಘರ್ಷವೇ

ಏರ್ಪಟ್ಟಿತು. ಲೂಥರ್ ಪ್ರಾರ್ಥನಾಗೀತೆ, ಬೈಬಲ್ ಅನುವಾದದ ರಚನೆಯಿಂದ ಜರ್ಮನ ಸಾಹಿತ್ಯದ ಮೇಲೆ ಪ್ರಭಾವ ಬೀರಿದ, ಹೊಸ ಸಾಹಿತ್ಯಸೃಷ್ಟಿಗೆ ಕಾರಣನಾದ. ಅಷ್ಟೇ ಅಲ್ಲ, ಆತನ ಬೈಬಲ್ ರಚನೆಯ ಭಾಷೆಯಿಂದ ಸಾಹಿತ್ಯದ ಭಾಷೆಯಲ್ಲಿಯೂ ಹೊಸ ಪ್ರಭೇಧ ಉಂಟಾಯಿತು. ಅಲ್ಲದೆ ಆತ ಮುಂದುವರಿದು ಬೈಬಲ್ ಆಧರಿಸಿ ಹೊಸ ರೀತಿಯ ನಾಟಗಳನ್ನು ಬರೆಯಬಹುದು ಎಂದುದನ್ನು ಸೂಚಿಸಿದ. ಮೋಲಿಯೇರನ ನಾಟಕಗಳು ಈ ದಿಸೆಯಲ್ಲಿ ಪ್ರಭಾವಿತವಾದ ರಚನೆ ಆದವುಗಳು.

ರಷಿಯದ ಕ್ರಾಂತಿಯಾಗಿದ್ದರಿಂದ ಪ್ರಪಂಚದ ರಾಜಕೀಯ ಧೋರಣೆಗಳು ಬುಡಮೇಲಾಗುತ್ತಿವೆ. ಕಮ್ಯುನಿಸಂ ಪ್ರಭಾವ ಆಗದ ದೇಶವೇ ಇಲ್ಲ. ಕಮ್ಯುನಿಸಂ ತತ್ವಗಳನ್ನು ತಮ್ಮ ಧೋರಣೆ, ತತ್ವಗಳಿಗೆ ಸಮನ್ವಯಿಸಿಕೊಂಡು ಮುಂದುವರಿಯುವುದು ಇಂದಿಗೂ ನಡೆದೇ ಇದೆ. ನಮ್ಮ ದೇಶದಲ್ಲಿ ಕೂಡ ಕಮ್ಯೂನಿಸಂ, ಸಮಾಜವಾದದ ಹೆಸರಿನಿಂದ ಬೆಳೆಯುತ್ತಲೇ ಇದೆ. ನಮ್ಮ ಕಾನ್‌ಸ್ಟಿಟ್ಯೂಷನ್‌ನಲ್ಲಿ ಕೂಡ ಪ್ರಜಾಸತ್ತಾತ್ಮಕ ಸಮಾಜವಾದಿ ಆಡಳಿತ ಎಂಬ ಆಳ್ವಿಕೆಯ ರಾಜ್ಯಾಂಗ ರೂಪುರೇಷೆ ರಚನೆಯಾಗಿದೆ.

ಹರಿಹರ ವಚನಕಾರರನ್ನೇ ಅಂದರೆ ಸದ್ಯದಲ್ಲಿ ಆಗಿ ಹೋದ ವ್ಯಕ್ತಿಗಳನ್ನೇ ಕುರಿತು ಸಾಹಿತ್ಯ ಕೃತಿಗಳ ರಚನೆ ಮಾಡಿದ. ಅದುವರೆಗೆ ಪುರಾಣದ ವಸ್ತುವನ್ನು ಆಯ್ದು ಬರೆಯುವ ಪದ್ಧತಿ ಪ್ರಚಾರದಲ್ಲಿತ್ತು. ಹರಿಹರನ ಈಥರದ ತೊಡಗುವಿಕೆಯಿಂದ ತೀರ ಸಾಮಾನ್ಯ ವ್ಯಕ್ತಿಗಳೂ ಸಾಹಿತ್ಯದ ವಸ್ತು ಆದರು. ಹೆಚ್ಚಾಗಿ ಜನತೆ ಆ ಬಗ್ಗೆ ಆಲೋಚಿಸುವ ಸಂದರ್ಭ ಏರ್ಪಟ್ಟಿತು. ಮಾದಾರ ಚೆನ್ನಯ್ಯ, ಡೋಹರಕಕ್ಕಯ್ಯ, ಶಂಕರ ದಾಸಿಮಯ್ಯ, ಕಂಬಳಿನಾಗಿದೇವನಂತಹವರು ಸಾಹಿತ್ಯ ಕೃತಿಯ ವಸ್ತುವಾದರು. ಅವರೂ (ಅಂತ್ಯಜರಾದರೂ) ಮನುಷ್ಯರು ಎಂಬ ಮನೋಭಾವ, ಮಾನವೀಯತೆ ಬೆಳೆಯುವಂತಾಯಿತು. ನಂತರ ಷಟ್ಪದಿ ಪ್ರಕಾರ ಬೆಳೆದು ಬಂದಿದ್ದರೂ ವಚನಕಾರರ ಪ್ರಭಾವದಿಂದಾಗಿಯೇ ಆಗಿದೆ. ವಚನಕಾರರ ಈ ಪ್ರಭಾವದಿಂದಾಗಿ ಶೋಷಕ ವರ್ಗದ ಸಾಹಿತ್ಯ ಕೃತಿಗಳಿಗೆ ಈ ಪರಂಪರೆಯವರು ಮರೆತು ಕೈ ಹಾಕಲಿಲ್ಲ. ವೈದಿಕ ಪರಂಪರೆಯ ಮೌಲ್ಯಗಳನ್ನು ಎತ್ತಿಹಿಡಿಯುವ ಕೃತಿಗಳಿಗೆ ಮೊದಲು ಪ್ರತಿಭಟನೆ ವಚನಕಾರರಿಂದ ನಡೆಯಿತು.

— ❋ —

## ಹ ನಂ. ವಿಜಯಕುಮಾರರ ಕೃತಿಗಳು

**ಕಾದಂಬರಿ :** ಬಿಲ್ವ ಬೆಳವಲ
ಇದ್ದವರ ನೋವುಗಳು
ಅಮುಖ್ಯ ವ್ಯಕ್ತಿಯ ಅನಾಥ ಬದುಕು
ಜಗದ್ಗುರು ಒಬ್ಬನ ಆತ್ಮಕಥೆ
ಗುರುಮನೆಯ ನೆರಳಲ್ಲಿ
ಅರಮನೆಯ ಅಂಗಳದಲ್ಲಿ
ಕಥೆ ಹೇಳುವ ಕಲ್ಲುಗಳು

**ನಾಟಕ :** ನಿರುದ್ಯೋಗಿಗಳು (ಉದ್ಯೋಗ ಪರ್ವ)
ಸಿಂಹಾಸನದ ಸುತ್ತಮುತ್ತ

**ಕಾವ್ಯ :** ಓಡುತ್ತಿದ್ದೇನೆ

**ಕನ್‌ಕಾರ್ಡೆನ್ಸ್ :** ಅಲ್ಲಮನ ವಚನ ಪ್ರಕೋಶ (ಅಚ್ಚಿನಲ್ಲಿ)

**ಸಂಪಾದಿಕ** ಚಿಂತನಾ
ಹಾಲನೊರೆಗೆ ಬೆಲ್ಲದ ಕೆಸರು
ಸಮಕಾಲೀನ ಧೋರಣೆ ಮತ್ತು ಸಾಹಿತ್ಯ ಪರಂಪರೆ
ಷಣ್ಮುಖ ಸ್ವಾಮಿಗಳ ವಚನಗಳು
ಚೈತ್ರ (1978, 1981)

ಅನುಬಂಧ ೨

## ಸದ್ಯ ಸಿಕ್ಕಿರುವ ಹನ್ನೆರಡನೇ ಶತಮಾನದಲ್ಲಿ ಆಗಿಹೋದ ವಚನಕಾರರ ಸಂಖ್ಯೆ ಮತ್ತು ಅಂಕಿತ

1 ಅಂಬಿಗ ಚೌಡಯ್ಯ–ಅಂಬಿಗರ ಚೌಡಯ್ಯ
2 ಅಗ್ಘವಣಿ ಹಂಪಯ್ಯ–ಹಂಪೆಯ ವಿರುಪಯ್ಯ
3 ಅಣತಿ ಚಂದಯ್ಯ–ಅಣತಿಯ ಲಿಂಗ
4 ಅನಾಮಿಕ ನಾಚಯ್ಯ–ನಾಚಯ್ಯ ಪ್ರಿಯಚೆನ್ನರಾಮ
5 ಅಮುಗಿ ದೇವಯ್ಯ–ಮಹಾಘನಸದ್ಗುರುಸೋಮನಾಥ
6 ಅಮುಗಿ ದೇವಯ್ಯ–ಸಿದ್ಧಸೋಮನಾಥಲಿಂಗ
7 ಅರಿವಿನ ಮಾರಿತಂದೆ–ಸದಾಶಿವಮೂರ್ತಿಲಿಂಗ
8 ಅಲ್ಲಮಪ್ರಭು–ಗುಹೇಶ್ವರ
9 ಅವಸರದ ರೇಕಣ್ಣ–ಸದ್ಯೋಜಾತಲಿಂಗ
10 ಅಹಂಕಾರ ಭೀಮಯ್ಯ ನಿರಹಂಕಾರ ಭೀಮಯ್ಯ
11 ಆದಯ್ಯ–ಸೌರಾಷ್ಟ್ರ ಸೋಮೇಶ್ವರ
12 ಆಯ್ದಕ್ಕಿ ಮಾರಯ್ಯ–ಅಮರೇಶ್ವರ ಲಿಂಗ
13 ಉಗ್ಗಡಿಸುವ ಬಿಬ್ಬಿದೇವಯ್ಯ–ಕೂಡಲಸಂಗಮದೇವರಲ್ಲಿ ಬಸವಣ್ಣ
14 ಉಪ್ಪರ ಗುಡಿಯ ಸೋಮದೇವಯ್ಯ–ಗಾರುಡೇಶ್ವರ
15 ಉರಿಲಿಂಗ ದೇವರು–ಉರಿಲಿಂಗ ದೇವ
16 ಉರಿಲಿಂಗ ಪೆದ್ದಿ–ಉರಿಲಿಂಗಪೆದ್ದಿಪ್ರಿಯ ವಿಶ್ವೇಶ್ವರ
17 ಎಚ್ಚರಿಕೆ ಕಾಯಕದ ಮುಕ್ತಿನಾಥ–ತುರಂಗೇಶ್ವರಲಿಂಗ
18 ಏಕಾಂತದ ರಾಮಯ್ಯ–ಏಕಾಂತರಾಮೇಶ್ವರ ಲಿಂಗ
19 ಏಕಾಂತ ರಾಮಿತಂದೆ–ಏಕಾಂತ ವೀರಸೊಡ್ಡಳ
20 ಏಲೇಶ್ವರದ ಕೇತಯ್ಯ–ಏಲೇಶ್ವರ ಲಿಂಗ
21 ಒಕ್ಕಲು ಮುದ್ದಯ್ಯ–ಕಾಮಭೀಮಜೀವಧನದೊಡೆಯ
22 ಕಂಬದ ಮಾರಿ ತಂದೆ–ಕದಂಬ ಲಿಂಗ
23 ಕನಕದ ನಾಚಯ್ಯ–ಕನಕದ ನಾಚಿಲಿಂಗ
24 ಕನ್ನಡಿ ಕಾಯಕದ ರಾಮಯ್ಯ–ಸದ್ಗುರುಸಂಗ ನಿರಂಗಲಿಂಗ
25 ಕನ್ನಡಿ ಕಾಯಕದ ಅಮ್ಮಿದೇವಯ್ಯ–ಚೆನ್ನಬಸವ ಪ್ರಿಯ ಕಮಳೇಶ್ವರ
26 ಕನ್ನದ ಮಾರಿತಂದೆ–ಮದನಾಂಗದೂರ ಮಾರೇಶ್ವರ
27 ಕರಸ್ಥಲದ ನಾಗಿದೇವ–ಗುರುಶಾಂತ
28 ಕರುಳ ಕೇತಯ್ಯ–ಮನಕ್ಕೆ ಮನೋಹರ ಶಂಭೇಶ್ವರಲಿಂಗ
29 ಕಲಕೇತಬೊಮ್ಮಯ್ಯ–ಮೇಖಲೇಶ್ವರಲಿಂಗ
30 ಕಾಮಾಟದ ಭೀಮಣ್ಣ–ದಾರೇಶ್ವರ
31 ಕಿನ್ನರ ಬ್ರಹ್ಮಯ್ಯ–ತ್ರಿಪುರಾಂತಕ ಲಿಂಗ

32 ಕಿರಾತ ಸಂಗಯ್ಯ - ಕಿರಾತೇಶ್ವರ ಲಿಂಗ
33 ಕೀಲಾರದ ಭೀಮಣ್ಣ - ಕಾಲಕರ್ಮವಿರಹಿತ ತ್ರಿಪುರಾಂತಕ ಲಿಂಗ
34 ಕನ್ನಪದ ಚಂದಯ್ಯ - ಕನ್ನಪದ ಚಂದೇಶ್ವರಲಿಂಗ
35 ಕೂಗಿನ ಮಾರಿತಂದೆ - ಮಹಾಮಹಿಮ ಮಾರೇಶ್ವರ
36 ಕೇದಾರ ಗುರು - ಕೇದಾರ ಗುರುದೇವ ಕ್ರಿ.ಶ 1500 ಕಾಲ?
37 ಕೋಲ ಶಾಂತಯ್ಯ - ಪುಣ್ಯಾರಣ್ಯದಹನ ಭೀಮೇಶ್ವರಲಿಂಗ
38 ಕೋಲ್ಪೂರದ ಬ್ರಹ್ಮಯ್ಯ - ಅಂಬುಧಾರಾರಾಮನಾಥ
39 ಕ್ಷೇತ್ರನಾಥ - ಕ್ಷೇತ್ರನಾಥಲಿಂಗ
40 ಗಜೇಶಮಸಣಯ್ಯ - ಗಜೇಶ್ವರ
41 ಗಣದಾಸಿ ವೀರಣ್ಣ - ಶಾಂತ ಕೂಡಲಸಂಗಮದೇವ
42 ಗಾಣದ ಕನ್ನಪ್ಪ - ಗುಹೇಶ್ವರ ನಲ್ಲಯ್ಯ
43 ಗಾವುದಿ ಮಾಚಯ್ಯ - ತ್ರಿಪುರಾಂತಕ ಲಿಂಗದಲ್ಲಿ ಗಾವುದಿ ಮಾಚಯ್ಯ
44 ಗುಪ್ತ ಮಂಚಣ್ಣ - ಗೋವಿಂದಪ್ರಿಯರಾಮನಾಥ?
45 ಗುಪ್ತ ಮಂಚಣ್ಣ - ನಾರಾಯಣಪ್ರಿಯ ರಾಮನಾಥ
46 ಗೋರಕ್ಷ - ಗೋರಕ್ಷಪಾಲಕ ಮಹಾಪ್ರಭು ಸಿದ್ಧ ಸೋಮನಾಥಲಿಂಗ
47 ಘಟ್ಟಿವಾಳಯ್ಯ - ಚಿಕ್ಕಯ್ಯಪ್ರಿಯ ಸಿದ್ಧ ಲಿಂಗ?
48 ಘನಲಿಂಗದೇವ - ಘನಲಿಂಗಿಯ ಮೋಹದ ಚೆನ್ನಮಲ್ಲಿಕಾರ್ಜುನ
49 ಚಂದಿಮರಸ - ಸಿಮ್ಮಲಿಗೆಯ ಚೆನ್ನರಾಮ
50 ಚಿಕ್ಕಣ್ಣ - ಉಳಿಯುಮೇಶ್ವರ
51 ಚೆನ್ನಬಸವಣ್ಣ - ಕೂಡಲಚೆನ್ನಸಂಗಮದೇವ
52 ಜೇಡರ ದಾಸಿಮಯ್ಯ - ರಾಮನಾಥ
53 ಜೋದರ ಮಾಯಣ್ಣ - ಸೋಮನಾಥಲಿಂಗ
54 ಡೋಹರ ಕಕ್ಕಯ್ಯ - ಅಭಿನವ ಮಲ್ಲಿಕಾರ್ಜುನ
55 ಢಕ್ಕೆಯ ಬೊಮ್ಮಣ್ಣ - ಕಾಲಾಂತಕ ಭೀಮೇಶ್ವರಲಿಂಗ
56 ತಳವಾರ ಕಾಮಿದೇವಯ್ಯ - ಕಾಮಹರಪ್ರಿಯ ರಾಮನಾಥ
57 ತುರುಗಾಹಿ ರಾಮಣ್ಣ - ಗೋಪತಿನಾಥ ವಿಶ್ವೇಶ್ವರಲಿಂಗ
58 ತೆಲುಗು ಜೊಮ್ಮಣ್ಣ - ತೆಲುಗೇಶ್ವರ
59 ದಸರಯ್ಯ - ದಸರೇಶ್ವರ ಲಿಂಗ
60 ದಾಸೋಹದ ಸಂಗಣ್ಣ - ಮದ್ರುಕೇಶ್ವರ ಲಿಂಗ
61 ನಗೆಯ ಮಾರಿ ತಂದೆ - ಆತುರವೈರಿ ಮಾರೇಶ್ವರ
62 ನಿಜಗುಣದೇವ - ನಿಜಗುಣಯೋಗಿ
63 ನಿರಂಜನದೇವ - ನಿರಂಜನಲಿಂಗ
64 ನಿವೃತ್ತಿ ಸಂಗಯ್ಯ - ನಿವೃತ್ತಿ ಸಂಗಯ್ಯ, 1500. ಕ್ರಿ.ಶ.ವಿ.?
65 ನುಲಿಯ ಚಂದಯ್ಯ - ಚಂದೇಶ್ವರಲಿಂಗ
66 ಪಂಡಿತಾರಾಧ್ಯ - ಗುರುಸಿದ್ಧ ಮಲ್ಲ?
67 ಪ್ರಸಾದಿ ಭೋಗಣ್ಣ - ಅಮರಗುಂಡದ ಮಲ್ಲಿಕಾರ್ಜುನ?
68 ಪಡಿಹಾರಿ ಉತ್ತಣ್ಣ - ಪಡಿಹಾರಿಪ್ರಿಯ ಕೂಡಲಸಂಗಮದೇವ

69 ಪರ್ವತನಾಥ—ಪರ್ವತನಾಥಲಿಂಗ
70 ಪಾಕದ ಭೀಮಯ್ಯ—ಭೀಮೇಶ್ವರಲಿಂಗ
71 ಪುಷ್ಪದ ಸೋಮಯ್ಯ—ಸೋಮೇಶ್ವರಲಿಂಗ
72 ಪ್ರಸಾದಿ ಬಂಕಣ್ಣ—ಚೆನ್ನಬಸವಣ್ಣ ಪ್ರಿಯಮಲ್ಲಿಕಾರ್ಜುನ ಲಿಂಗ
73 ಪ್ರಸಾದಿ ಲೆಂಕಬಂಕಣ್ಣ—ಚಂಡಿಕೇಶ್ವರಲಿಂಗ
74 ಫರಾಕು ದೇವಯ್ಯ—ಮಹಾದೇವಲಿಂಗ
75 ಬತ್ತಲೇಶ್ವರ—ನಿರಾಳಲಿಂಗ. ಕ.ಕ.—ಕಾಲ, 1430 ?
76 ಬಸವಣ್ಣ—ಕೂಡಲಸಂಗಮದೇವ
77 ಬಹುರೂಪಿ ಚೌಡಯ್ಯ—ರೇಕಣ್ಣ ಪ್ರಿಯನಾಗಿನಾಥ
78 ಬಳ್ಳೇಶಮಲ್ಲಯ್ಯ—ಬಳ್ಳೇಶ್ವರ
79 ಬಾಚಿಕಾಯಕದ ಬಸಪ್ಪ—ಬಸವಣ್ಣ ಪ್ರಿಯ ವಿಶ್ವಕರ್ಮಟಕ್ಕೆ ಕಾಳಿಕಾವಿಮಲ ರಾಜೇಶ್ವರಲಿಂಗ
80 ಬಾಲಬೊಮ್ಮಣ್ಣ—ವೀರಶೂರರಾಮೇಶ್ವರಲಿಂಗ
81 ಬಾಲಸಂಗಣ್ಣ—ಕಮಠೇಶ್ವರಲಿಂಗ
82 ಬಾಹೂರ ಬೊಮ್ಮಣ್ಣ—ಸಂಗನ ಬಸವಣ್ಣ ಪ್ರಿಯ ಬ್ರಹ್ಮೇಶ್ವರಲಿಂಗ
83 ಬಿಬ್ಬಿಬಾಚಯ್ಯ—ಏಣಾಂಕಧರ ಸೋಮೇಶ್ವರಲಿಂಗ
84 ಬಿಡಗಿನ ಸುಂದರಯ್ಯ—ಸುಂದರ ಶಿವಲಿಂಗಯ್ಯ
85 ಬೊಕ್ಕಸದ ಚಿಕ್ಕಣ್ಣ—ಬಸವಣ್ಣ ಪ್ರಿಯ ನಾಗೇಶ್ವರ
86 ಭರಿತಾರ್ಪಣದ ಚೆನ್ನಬಸವಣ್ಣ—ಚೆನ್ನ ಚೆನ್ನ ಕೂಡಲ ರಾಮೇಶ್ವರಲಿಂಗ
87 ಭೋಗಣ್ಣ—ನಿಜಗುರು ಭೋಗಸಂಗ
88 ಮಡಿವಾಳ ಮಾಚಿದೇವ—ಕಲಿದೇವರ ದೇವ
89 ಮಧುವಯ್ಯ—ಅರ್ಕೇಶ್ವರಲಿಂಗ
90 ಮನಸಂದ ಮಾರಿತಂದೆ—ಮನಸಂದ ಮಾರೇಶ್ವರ
91 ಮನುಮುನಿಗೊಮ್ಮಟಯ್ಯ—ಅಗಮೇಶ್ವರ ಲಿಂಗ
92 ಮರುಳಶಂಕರದೇವ—ಶುದ್ಧ ಸಿದ್ಧ ಪ್ರಸಿದ್ಧ ಪ್ರಭುವೇ ಶಾಂತ ಚೆನ್ನಮಲ್ಲಿಕಾರ್ಜುನ
93 ಮರುಳ ಸಿದ್ಧೇಶ್ವರ—ರೇವಣ್ಣ ಪ್ರಭು ?
94 ಮಲಹರ ಕಾಯಕದ ಚಿಕ್ಕದೇವಯ್ಯ—ಊರ್ಧ್ವರೇತೋ ಮೂರ್ತಿ ಶ್ವೇತ ಸ್ವಯಂಭು ಕಪಿಲೇಶ್ವರ ಲಿಂಗ
95 ಮಲ್ಲಯ್ಯ—ಗುರುಪುರದ ಮಲ್ಲಯ್ಯ
96 ಮಾದಾರ ಚೆನ್ನಯ್ಯ—ಕೈ ಉಳಿಕತ್ತಿ ಅಡಿಗೂಟಕ್ಕೆಡೆ ಯಾಗಬೇಡ ಅರಿ ನಿಜಾತ್ಮ ರಾಮರಾಮನ
97 ಮಾದಾರಧೂಳಯ್ಯ—ಧೂಳೇಶ್ವರ
98 ಮಾರೇಶ್ವರೊಡೆಯ—ಮಾರೇಶ್ವರ
99 ಮಿಂಡಸಂಗಯ್ಯ—ತರುಣಸಂಗಮಲಿಂಗದೇವ
100 ಮುಗ್ಧಸಂಗಯ್ಯ—ಮುಗ್ಧಸಂಗಯ್ಯ
101 ಮುಮ್ಮಡಿ ಕಾರ್ಯೇಂದ್ರ—ಮಹಾಘನದೊಡ್ಡದೇಶಿ ಕಾರ್ಯ ಗುರುಪ್ರಭು ?

102 ಮೂಲಪ್ರಣವದೇವ—ಮೂಲಪ್ರಣವದೇವ ?
103 ಮೆರೆಮಿಂಡದೇವ—ಐಘಟದೂರ ರಾಮೇಶ್ವರ ಲಿಂಗ
104 ಮೇದಾರ ಕೇತಯ್ಯ—ಗೌರೇಶ್ವರ
105 ಮೈದುನ ರಾಮಯ್ಯ—ಮಹಾಲಿಂಗಚೆನ್ನರಾಮ
106 ಮೋಳಿಗೆಮಾರಯ್ಯ—ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನ
107 ರಕ್ಕಸ ಬೊಮ್ಮಯ್ಯ—ರಕ್ಕಸನೊಡೆಯ
108 ರತ್ನದ ರಾಚಯ್ಯ—ವೀರ ರಾಚೋಟಿಲಿಂಗ
109 ರಾಯಸದ ಮಂಚಣ್ಣ—ಜಾಂಬೇಶ್ವರ
110 ಲಿಂಗಸತ್ಯಣ್ಣ—ಲಿಂಗಸತ್ಯಣ್ಣ
111 ವಚನಭಂಡಾರಿ ಶಾಂತರಸ—ಅಲೇಖನಾಥ
112 ವರದಸಂಗಣ್ಣ—ವರದ ಶಂಕೇಶ್ವರ
113 ವೀರಚಂಡ—ವೀರಚಂಡಲಿಂಗ
114 ವೀರಗೊಲ್ಲಾಳ—ಬೀರೇಶ್ವರ
115 ವೇದಮೂರ್ತಿ ಸಂಗಣ್ಣ—ಲಲಾಮಭೀಮಸಂಗಮೇಶ್ವರ ಲಿಂಗ
116 ವೈದ್ಯಸಂಗಣ್ಣ—ಮರುಳ ಶಂಕರಪ್ರಿಯಸಿದ್ಧರಾಮೇಶ್ವರ ಲಿಂಗ
117 ಶಂಕರದಾಸಿಮಯ್ಯ—ನಿಜಗುರು ಶಂಕರದೇವ
118 ಶಂಕರ ಸೋಮಯ್ಯ—ಸಾಂಬ ಸೋಮೇಶ್ವರಲಿಂಗ
119 ಶಾಂತರಾಮ—ಶಾಂತರಾಮಲಿಂಗ
120 ಶಾಂತಶೆಟ್ಟಿ—ಶಿವಶಾಂತಲಿಂಗ
121 ಶಾರ್ದೂಲಸಂಗಯ್ಯ—ಶಾರ್ದೂಲಲಿಂಗ
122 ಶಿವಪೂಜೆಯ ಭೀಮಯ್ಯ—ಶಿವಪೂಜೆಯ ಭೀಮಯ್ಯ
123 ಶಿವಲೆಂಕ ಮಂಚಣ್ಣ—ಈಶಾನ್ಯಮೂರ್ತಿ ಮಲ್ಲಿಕಾರ್ಜುನ ಲಿಂಗ
124 ಶಿವಾನಂದ ದೇವ—ಶಿವಾನಂದ ಲಿಂಗ
125 ಸಕಳೇಶಮಾದರಸ—ಸಕಳೇಶ್ವರ
126 ಸಗರದ ಬೊಮ್ಮಣ್ಣ—ಸಗರದ ಬೊಮ್ಮನೊಡೆಯ ಸಂಗಮೇಶ್ವರ
127 ಸತ್ತಿಗೆ ಕಾಯಕದ ರಾಮಿತಂದೆ—ಐಘಟೇಶ್ವರಲಿಂಗ
128 ಸಿದ್ಧರಾಮ—ಕಪಿಲಸಿದ್ಧಮಲ್ಲಿಕಾರ್ಜುನ
129 ಸಿದ್ಧಾಂತಿ ವೀರಸಂಗಯ್ಯ—ಗೋಳಕಾಕಾರ ವಿಶ್ವ ವಿರಹಿತ ಲಿಂಗ
130 ಸುಂಕದ ಬಂಕಣ್ಣ—ಬಂಕೇಶ್ವರ ಲಿಂಗ
131 ಸುವರ್ಣದೇವಿ—ಸುವರ್ಣ ಲಿಂಗ
132 ಸೂಜಿಕಾಯಕದ ರಾಮಿತಂದೆ—ಪ್ರಸನ್ನ ಕಪಿಲಸಿದ್ಧ ಮಲ್ಲಿಕಾರ್ಜುನ
133 ಸೊಡ್ಡಳಬಾಚರಸ—ಸೊಡ್ಡಳ
134 ಹಡಪದಪ್ಪಣ್ಣ—ಬಸವಪ್ರಿಯಕೂಡಲಚೆನ್ನಸಂಗಮದೇವ
135 ಹಡಪದರೇಚಣ್ಣ—ನಿಃಕಳಂಕ ಕೂಡಲಚೆನ್ನಸಂಗಮದೇವ
136 ಹಾವಿನ ಹಾಳ ಕಲ್ಲಯ್ಯ—ಕಲ್ಲೇಶ್ವರ
137 ಹೆಂಡದ ಮಾರಯ್ಯ—ಧರ್ಮೇಶ್ವರ
138 ಹೊಡೆಹುಲ್ಲಬಂಕಣ್ಣ—ಕುಂಭೇಶ್ವರ ಲಿಂಗ

## ಹನ್ನೆರಡನೇ ಶತಮಾನದ ವಚನಕಾರ್ತಿಯರ ಸಂಖ್ಯೆ ಮತ್ತು ಅಂಕಿತ

1 ಅಕ್ಕನಾಗಮ್ಮ—ಬಸವಣ್ಣ ಪ್ರಿಯ ಚೆನ್ನಸಂಗ
2 ಅಕ್ಕಮಹಾದೇವಿ—ಚೆನ್ನಮಲ್ಲಿಕಾರ್ಜುನ
3 ಅಕ್ಕಮ್ಮ—ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ
4 ಅಮುಗೆರಾಯಮ್ಮ—ಅಮುಗೇಶ್ವರಲಿಂಗ ?
5 ಕದಿರಕಾಯಕದ ರೆಮ್ಮವ್ವೆ—ಕದಿರರೆಮ್ಮಿಯೊಡೆಯ ಗುಮ್ಮೇಶ್ವರ
6 ಕಾಲಕಣ್ಣಿಯ ಕಾಮಮ್ಮ—ನಿರ್ಭೀತಿ ನಿಜಲಿಂಗ (ಕ.ಕ. 1500)
7 ಕಾಳವ್ವೆ (ಬಾಚಿಕಾಯಕದ ಬಪ್ಪನ ಪತ್ನಿ) ಕರ್ಮಹರ ಕಾಳೇಶ್ವರ
8 ಕಾಳವ್ವೆ (ಬುದ್ಧಯ್ಯನ ಪತ್ನಿ) ಭೀಮೇಶ್ವರ
9 ಕಾಳವ್ವೆ (ಉರಿಲಿಂಗಪೆದ್ದಿಯ ಪತ್ನಿ) ಉರಿಲಿಂಗಪೆದ್ದಿಗಳರಸ
10 ಕೊಟ್ಟಣದ ಸೋಮವ್ವೆ—ನಿರ್ಜಜ್ಞೇಶ್ವರ
11 ಗಂಗಮ್ಮ—ಗಂಗೇಶ್ವರಲಿಂಗ
12 ಗಂಗಾಂಬಿಕೆ—ಗಂಗಾಪ್ರಿಯ ಕೂಡಲಸಂಗಮದೇವ
13 ಗುಡ್ಡವ್ವೆ—ನಿಂಬೇಶ್ವರ (ಕ. ಕ. 1430)
14 ಗೊಗ್ಗವ್ವೆ—ನಾಸ್ತಿನಾಥ
15 ದುಗ್ಗಳೆ—ದಾಸಯ್ಯ ಪ್ರಿಯರಾಮನಾಥ
16 ನೀಲಾಂಬಿಕೆ—ಬಸವಪ್ರಿಯ ಕೂಡಲಸಂಗಮದೇವ
17 ಬೊಂತಾದೇವಿ—ಬಿಡಾಡಿ
18 ಮಸಣಮ್ಮ—ನಿಜಗುಣೇಶ್ವರ (ಕ. ಕ. ೧೫೦೦)
19 ಮಹಾದೇವಿ—ಮಹಾದೇವಜ್ಯೋತಿ
20 ಮಹಾದೇವಿಯಮ್ಮ (ಮೋಳಿಗಯ್ಯಗಳ ಪತ್ನಿ) ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ
21 ಮುಕ್ತಾಯಕ್ಕ—ಅಜಗಣ್ಣ ತಂದೆ
22 ರೇಚವ್ವೆ—ಕುಂಭೇಶ್ವರ
23 ಲಕ್ಕಮ್ಮ (ಆಯ್ದಕ್ಕಿ ಮಾರಯ್ಯಗಳ ಪತ್ನಿ) ಮಾರಯ್ಯ ಪ್ರಿಯ ಅಮರೇಶ್ವರಲಿಂಗ
24 ಲಕ್ಕಮ್ಮ—ಅಗಜೇಶ್ವರ
25 ಲಿಂಗಮ್ಮ (ಪಡಿಹಾರಿ ಅಪ್ಪಣ್ಣನ ಪತ್ನಿ) ಅಪ್ಪಣ್ಣ ಪ್ರಿಯ
26 ವೀರಮ್ಮ—ಗುರು ಶಾಂತೇಶ್ವರ
27 ಸತ್ಯಕ್ಕ—ಶಂಭು ಜಕ್ಕೇಶ್ವರ
28 ರೆಮ್ಮವ್ವೆ—ಆಚಾರವೇ ಪ್ರಾಣವಾದ ರಾಮೇಶ್ವರಲಿಂಗ
29 ಕದಿರ ಕಾಳವ್ವೆ—ಗುಮ್ಮೇಶ್ವರ
30 ರೇಮಮ್ಮ—ಸದ್ಗುರುಸಂಗ ನಿರಂಗಲಿಂಗ
31 ಸೂಳೆಸಂಕವ್ವೆ—ನಿರ್ಲಜ್ಜೇಶ್ವರ

32 ಗಜೇಶಮಸಣಯ್ಯಗಳ ಪುಣ್ಯಸ್ತ್ರೀ—ಮಸಣಯ್ಯಪ್ರಿಯ
ಗಜೇಶ್ವರಾ

33 ರೇಕಮ್ಮ (ರೇವಣ್ಣ ಸಿದ್ಧಯ್ಯಗಳ ಪತ್ನಿ) ಶ್ರೀಗುರು
ಸಿದ್ಧೇಶ್ವರ

34 ಲಕ್ಷ್ಮಮ್ಮ (ಕೊಡೆಮಂಚಣ್ಣಗಳ ಪತ್ನಿ) ಅಗಜೇಶ್ವರಲಿಂಗ

35 ರೇಚವ್ವೆ (ಕಾಟಕೂಟಯ್ಯಗಳ ಪತ್ನಿ) ನಿಜಲಿಂಗ
ಶಾಂತೇಶ್ವರ

36 ಕೇತಲದೇವಿ (ಗುಂಡಯ್ಯನ ಪತ್ನಿ) ಕುಂಭೇಶ್ವರಾ

## ವಚನಾಂಕಿತಗಳು ದೊರೆತು ಕರ್ತೃ ತಿಳಿಯದ ಅಂಕಿತಗಳು

1) ನಿಜಗುರು ಶಾಂತೇಶ್ವರ
2) ಭೌಂಭೇಶ್ವರ
3) ಹುಲಿಗೆರೆಯ ವರದಸೋಮೇಶ
4) ಘನಗುರುಪ್ರಿಯ ಸೋಮನಾಥ
5) ಪ್ರಿಯನಿಸ್ಸಂಗಲಿಂಗರಾಮನಾಥ
6) ನಂದಗೋಪಿಯ ಕಂದ
7) ಕದಂಬ ಕಲಶ ಕೂಡಲಚೆನ್ನಸಂಗ
8) ಕುಮಾರ ಸಂಗ

## ಹನ್ನೆರಡನೇ ಶತಮಾನದ ನಂತರ ಬಂದ ಕೆಲವು ವಚನಕಾರರು

1) ಕಡಕೊಳದ ಮಡಿವಾಳಪ್ಪ—ನಿರುಪಮನಿರಾಳಪ್ರಭು
ಮಹಂತಯೋಗಿ

2 ಕಾಣಿಲಿಂಗದೇವ—ಕಾಣಿಲಿಂಗದೇವ
3 ಗುಮ್ಮಳಾಪುರದ ಸಿದ್ಧಲಿಂಗದೇವ—ಚೋಳಬಸವೇಶ್ವರ
4 ಗುರುಬಸವ—ಗುರುಬಸವ
5 ತೋಂಟದ ಸಿದ್ಧಲಿಂಗೇಶ್ವರ—ಮಹಾಲಿಂಗಗುರುಶಿವ
ಸಿದ್ಧೇಶ್ವರ ಪ್ರಭುವೆ

6 ಸಿದ್ಧವೀರದೇವ—ತೋಂಟದ ಸಿದ್ಧಲಿಂಗದೇವ
7 ಸ್ವತಂತ್ರ ಸಿದ್ಧಲಿಗೇಶ್ವರ—ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರ
8 ರೇಕಮ್ಮ—ಶ್ರೀಗುರು ಸಿದ್ಧೇಶ್ವರ
9 ಷಣ್ಮುಖಸ್ವಾಮಿ—ಅಖಂಡೇಶ್ವರ



ವಚನಕಾರರ ಇತಿಮಿತಿಗಳ ಬಗೆಗೆ ಅವರ ಆಂದೋಲನದ ಬಗೆಗೆ ವಿಶೇಷವಾಗಿ 1917ರ ರಷಿಯದ ಕ್ರಾಂತಿಯ ಹಿನ್ನೆಲೆಯಲ್ಲಿ ಅಧ್ಯಯನಮಾಡಿ ಬರೆದ ಕೃತಿ ಇದು. ವಚನಕಾರರದು ಆಂದೋಲನವೇ ? ಚಳುವಳಿಯೆ ? ಕ್ರಾಂತಿಯೆ ? ಸುಧಾರಣೆಯೆ ? ಇತ್ಯಾದಿ ಪ್ರಶ್ನೆಗಳು ನಮ್ಮ ಎದುರಿಗೆ ಇವೆ. ನನ್ನ ಅಧ್ಯಯನದ ಪರಿಣಾಮವಾಗಿ ವಚನಕಾರರು ನಡೆಸಿದ್ದು ಆಂದೋಲನ ಎಂದೇ ಗುರುತಿಸಿದ್ದೇನೆ. ಈ ಬಗ್ಗೆ, ಬಸವಣ್ಣನ ವ್ಯಕ್ತಿತ್ವದ ಬಗ್ಗೆ ಇಷ್ಟರಲ್ಲೇ ನನ್ನ ನಿಬಂಧ ಹೊರಬರಲಿದೆ.



Cover Ptd. by Bhaskar Printers, B-53 Phone: 75467